KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ನವೆಂಬರ್ ೧೨, ೨೦೦೯ (ಕಾರ್ತೀಕ ೨೧, ಶಕ ವರ್ಷ ೧೯೩೧) | ಸಂಚಿಕೆ ೪೫ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಶ್ರೀ ವೈ.ಎಸ್.ಮಲ್ಲಿಕಾರ್ಜುನ್, ತಹಶೀಲ್ದಾರ್, ಸಿಂಧನೂರು ಇವರ ವರ್ಗಾವಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂ: ಕಂಇ 32 ಎಟಿಎಸ್ 2009, ದಿನಾಂಕ: 4–7–2009 ಹಾಗೂ ಪರಿಷ್ಕರಿಸಿದ ಅಧಿಸೂಚನೆ ದಿನಾಂಕ: 6–7–2009

2) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂ: 2875/2009ರ ದಿನಾಂಕ: 16–07–2009ರ ಆದೇಶ.

**ಪ್ರಸ್ತಾವನೆ:**

ಸರ್ಕಾರದ ಅಧಿಸೂಚನೆ ಸಂ: ಕಂಇ 32 ಎಟಿಎಸ್ 2009, ದಿನಾಂಕ:04–07–2009 ರಲ್ಲಿ 82 ಜನ ತಹಶೀಲ್ದಾರರುಗಳನ್ನು ವರ್ಗಾಯಿಸಿದ್ದು, ನಂತರ ಸದರಿ ಅಧಿಸೂಚನೆಯನ್ನು ಪರಿಷ್ಕರಿಸಿ, ದಿ:6–7–2009ರಂದು 81 ಜನ ತಹಶೀಲ್ದಾರರುಗಳ ವರ್ಗಾವಣೆ ಆದೇಶವನ್ನು ಹೊರಡಿಸಲಾಗಿದೆ. ಇದರಲ್ಲಿ ಶ್ರೀ ವೈ.ಎಸ್.ಮಲ್ಲಿಕಾರ್ಜುನ್, ತಹಶೀಲ್ದಾರ್, ಸಿಂಧನೂರು ಇವರನ್ನು ವಿಶೇಷ ತಹಶೀಲ್ದಾರ್, ಗುರುಮಿಟಕಲ್, ಗುಲ್ಬರ್ಗಾ ಜಿಲ್ಲೆ (ಖಾಲಿ ಹುದ್ದೆ) ಇಲ್ಲಿಗೆ ವರ್ಗಾಯಿಸಲಾಗಿದೆ. ಈ ಆದೇಶವನ್ನು ಶ್ರೀ ವೈ.ಎಸ್.ಮಲ್ಲಿಕಾರ್ಜುನ್, ತಹಶೀಲ್ದಾರ್, ಸಿಂಧನೂರು ಇವರು ಕೆ.ಎ.ಟಿಯಲ್ಲಿ ಅರ್ಜಿ ಸಂ:2875/2009ರಲ್ಲಿ ಪ್ರಶ್ನಿಸಿದ್ದು, ದಿನಾಂಕ:16–07–2009ರಂದು ನ್ಯಾಯಮಂಡಳಿಯು ಆದೇಶವನ್ನು ಹೊರಡಿಸಿರುತ್ತದೆ. ನ್ಯಾಯಮಂಡಳಿಯ ಆದೇಶದಲ್ಲಿ ಅರ್ಜಿದಾರರಾದ ಶ್ರೀ ವೈ.ಎಸ್.ಮಲ್ಲಿಕಾರ್ಜುನ್, ಇವರು ದಿನಾಂಕ:15–07–2009 ರಂದು ಸಲ್ಲಿಸಿರುವ ಅರ್ಜಿಯ ಮೇಲೆ ನಿಯಾಮಾನುಸಾರ 2 ವಾರದೊಳಗಾಗಿ ಆದೇಶ ಮಾಡುವಂತೆ ಸೂಚಿಸಿ, ಅಲ್ಲಿಯವರೆಗೆ 'ಸ್ಟೇಟಸ್ ಸ್ಕೋ' ಮಾಡುವಂತೆ ಆದೇಶಿಸಿರುತ್ತದೆ. ಈಗಾಗಲೇ ವೃಂದ ನಿರ್ವಹಣಾ ಪ್ರಾಧಿಕಾರವು ದಿ:20–06–2009 ರಂದು ಸಭೆ ನಡೆಸಿ, ಶ್ರೀ ವೈ.ಎಸ್.ಮಲ್ಲಿಕಾರ್ಜುನ್ ಹಾಗೂ ಇತರರ ವರ್ಗಾವಣೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಲು ಶಿಫಾರಸ್ಸು ಮಾಡಿದೆ. ಸದರಿ ಅಧಿಕಾರಿಯ ವರ್ಗಾವಣೆಯನ್ನು ವೃಂದ ನಿರ್ವಹಣಾ ಪ್ರಾಧಿಕಾರ ಹಾಗೂ ಸನ್ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆಯನ್ನು ಪಡೆದು ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಮಾಡಿರುವುದರಿಂದ ಶ್ರೀ ವೈ.ಎಸ್.ಮಲ್ಲಿಕಾರ್ಜುನ ಇವರ ಕೋರಿಕೆಯನ್ನು ಮರುಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 401 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 24ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಶ್ರೀ ವೈ.ಎಸ್.ಮಲ್ಲಿಕಾರ್ಜುನ್, ತಹಶೀಲ್ದಾರ್, ಸಿಂಧನೂರು (ವಿಶೇಷ ತಹಶೀಲ್ದಾರ್ ಗುರುಮಿಟಕಲ್, ಗುಲ್ಬರ್ಗಾ ಜಿಲ್ಲೆ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವ) ಇವರ ವರ್ಗಾವಣೆಯನ್ನು ದಿನಾಂಕ:20–06–2009ರಂದು ವೃಂದ ನಿರ್ವಹಣಾ ಪ್ರಾಧಿಕಾರದ ಹಾಗೂ ಮುಖ್ಯಮಂತ್ರಿಗಳ ಅನುಮೋದನೆ ಪಡೆದು, ವರ್ಗಾವಣೆ ಆದೇಶ ಹೊರಡಿಸಿರುವುದರಿಂದ, ಇವರನ್ನು ಸಿಂಧನೂರು ತಾಲ್ಲೂಕು ತಹಶೀಲ್ದಾರ್ ಹುದ್ದೆಯಲ್ಲಿ

ಮುಂದುವರೆಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಅವರ ಕೋರಿಕೆಯನ್ನು ತಿರಸ್ಕರಿಸಿದೆ. ಸದರಿ ಅಧಿಕಾರಿಯು ವರ್ಗಾಯಿಸಿದ ಸ್ಥಳದಲ್ಲಿ ಈ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1769

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎಸ್.ಡಿ.ಘೀವಾರಿ, ಹಿಂದಿನ ತಹಶೀಲ್ದಾರ್ ಬಾಗಲಕೋಟೆ ಪ್ರಸ್ತುತ ನಿವೃತ್ತ ಇವರ ವಿರುದ್ಧ ಇಲಾಖಾ ವಿಚಾರಣೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ.46 ಎಡಿಇ:2004 ದಿ:15–09–2004
2. ಬಾಗಲಕೋಟೆ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಆರ್.ಬಿ./ಸಿಬ್ಬಂದಿ–2/ಸಿಆರ್–25/04–05 ದಿನಾಂಕ:15.10.2004
3. ದಿನಾಂಕ: 2–12–2004ರ ಸರ್ಕಾರದ ಕಾರಣ ಕೇಳುವ ನೋಟಿಸ್ ಸಂಖ್ಯೆ: ಆರ್.ಡಿ.46.ಎಡಿಇ:2004
4. ಶ್ರೀ ಎಸ್.ಡಿ.ಘೀವಾರಿ, ನಿವೃತ್ತ ತಹಶೀಲ್ದಾರರ ದಿ:21–12–2005ರ ಹೇಳಿಕೆ.
5. ಸರ್ಕಾರದ ಆದೇಶ ಸಂ: ಕಂಇ 46 ಎಡಿಇ 2004, ದಿನಾಂಕ:24–01–2005.
6. ಸರ್ಕಾರದ ಆದೇಶ ಸಂಖ್ಯೆ: ಕಂಇ:46:ಎಡಿಇ:2004, ದಿ:21–07–2006.
7. ಸರ್ಕಾರದ ಆದೇಶ ಸಂ: ಆರ್‌ಡಿ 46 ಎಡಿಇ 04, ದಿನಾಂಕ:21–02–07
8. ವಿಚಾರಣಾಧಿಕಾರಿಗಳ ದಿನಾಂಕ:24–03–2008ರ ವಿಚಾರಣಾ ವರದಿ.
9. ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ: 11–04–2008.
10. ಶ್ರೀ ಎಸ್.ಡಿ.ಘೀವಾರಿ, ನಿವೃತ್ತ ತಹಶೀಲ್ದಾರ್ ಇವರ ದಿನಾಂಕ: 30–04–2008ರ ಲಿಖಿತ ಉತ್ತರ.
11. ಸರ್ಕಾರದ ಉತ್ತರ ಸಂ: ಆರ್‌ಡಿ 46 ಎಡಿಇ 04, ದಿ:27/31–01–09.
12. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ:ಪಿಎಸ್‌ಸಿ/206/ ಸಿಎನ್‌ಎಸ್/2008, ದಿನಾಂಕ:16.05.2009.

**ಪ್ರಸ್ತಾವನೆ**

ಶ್ರೀ ಎಸ್.ಡಿ.ಘೀವಾರಿ ತಹಶೀಲ್ದಾರ್ ಹಾಲಿ ನಿವೃತ್ತ ಇವರು ತಹಶೀಲ್ದಾರ್ ಬಾಗಲಕೋಟೆ ತಾಲ್ಲೂಕು ಹಾಗೂ ಕಾರ್ಯದರ್ಶಿ ಭೂ ನ್ಯಾಯಮಂಡಳಿ ಬಾಗಲಕೋಟೆ ಅಂತ ಕಾರ್ಯನಿರ್ವಹಿಸುತ್ತಿದ್ದಾಗ ಬಾಗಲಕೋಟೆ ತಾಲ್ಲೂಕಿನ ಅನ್ನದಿನ್ನಿ ಗ್ರಾಮದ ರಿ.ಸ.ನಂ.4ಕ್ಕೆ ಸಂಬಂಧಿಸಿದಂತೆ ಭೂನ್ಯಾಯಮಂಡಳಿಯ ಆದೇಶ ಕುರಿತು ಸದರಿ ಸರ್ವೆ ನಂಬರಿನ ಹೆ:ರದ ಪಟ್ಟಾಕಾಲಂದಲ್ಲಿ ಗಾಯರಾಣಾ ಅಂತಾ ನಮೂದು ಇದ್ದರೂ ಅದನ್ನು ಪರಿಶೀಲಿಸದೆ ಗೇಣಿ ಅರ್ಜಿಯನ್ನು ಭೂ ನ್ಯಾಯಮಂಡಳಿ ಮುಂದೆ ಇಟ್ಟಿರುವುದು ಗೇಣಿ ಜಮೀನೆಂದು ನಮೂನೆ 7ರಲ್ಲಿ ಹಾಕಿದ ಅರ್ಜಿಯನ್ನು ದಿ:2–10–1965ರಿಂದ 1–3–1974 ರವರೆಗೆ ಹಾಗೂ ತದನಂತರ ಹೆಸರು ಕಡಿಮೆಯಾದ ಬಗ್ಗೆ ಸಂಬಂಧಿಸಿದ ದಾಖಲೆಗಳೊಂದಿಗೆ ಪರಿಶೀಲಿಸಿ ಪರಿಶೀಲನಾ ಪಟ್ಟಿಯೊಂದಿಗೆ ಭೂನ್ಯಾಯ ಮಂಡಳಿ ಅಧ್ಯಕ್ಷರಿಗೆ ಸಲ್ಲಿಸದೇ ಕರ್ತವ್ಯ ಲೋಪವೆಸಗಿರುವುದು ಸದರಿ ಅರ್ಜಿದಾರರ ಹೆಸರು ಇತರ ಹಕ್ಕಿನಲ್ಲಿ ಸಾದಾಕುಳವೆಂದು ದಾಖಲಿದ್ದರೂ ಅದು ದಾಖಲಾತಿ ಇಲ್ಲದೆ ಇದ್ದುದನ್ನು ಪರಿಶೀಲಿಸಿ ಅಧ್ಯಕ್ಷರ ಗಮನಕ್ಕೆ ತರದಿರುವುದು ಹಾಗೂ ಭೂನ್ಯಾಯ ಮಂಡಳಿಯ ಅಧ್ಯಕ್ಷರು ತಮ್ಮ ಅಸಮ್ಮತಿ ಸೂಚಿಸಿ ಸದಸ್ಯರ ಬಹುಮತವಿದ್ದುದರಿಂದ ಬಹುಮತ ನಿರ್ಣಯದ ಆದೇಶವನ್ನು ಮಾಡಿದ್ದು ಇದೊಂದು ಡಿಸೆಂಡಿಂಗ್ ಆದೇಶವಿದ್ದು ಇದನ್ನು ಸರ್ಕಾರಕ್ಕೆ ಪರಿಶೀಲನೆಗಾಗಿ ಕಳುಹಿಸುವ ಮೊದಲು ತುರಾತುರಿಯಲ್ಲಿ ನಮೂನೆ ನಂ.10 ನ್ನು ಕೊಟ್ಟಿರುವ ಗಂಭೀರ ಕರ್ತವ್ಯ ಲೋಪದ ಬಗ್ಗೆ ಬಾಗಲಕೋಟೆ ಜಿಲ್ಲಾಧಿಕಾರಿಗಳ ವರದಿಯನ್ವಯ ಸದರಿಯವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಕಾಯ್ದಿರಿಸಿ ಸದರಿಯವರನ್ನು ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ: 15–9–2004ರ ಆದೇಶದಲ್ಲಿ ಅಮಾನತ್ತುಗೊಳಿಸಲಾಗಿತ್ತು. ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:15–10–2004ರ ಪತ್ರದಲ್ಲಿ ಬಾಗಲಕೋಟೆ ಜಿಲ್ಲಾಧಿಕಾರಿಗಳು ದೋಷಾರೋಪಣೆ ಪಟ್ಟಿಯನ್ನು ಸರ್ಕಾರಕ್ಕೆ ಕಳುಹಿಸಿದ್ದರು. ಶ್ರೀ ಎಸ್.ಡಿ. ಘೀವಾರಿ ರವರ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ–1 ರಿಂದ 4ರವರೆಗೆ) ಮೇಲೆ ಕ್ರ.ಸಂ.3ರಲ್ಲಿ ಓದಲಾದ ದಿನಾಂಕ:2–12–2004ರ ಕಾರಣ ಕೇಳುವ ನೋಟೀಸ್‌ನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರು ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಸದರಿಯವರು ದಿನಾಂಕ:31.12.2004ರಂದು ಸಲ್ಲಿಸಿರುವ ಮನವಿಯಲ್ಲಿ ಅನುಬಂಧ–3ರ ದಾಖಲಾತಿ ನೀಡಲು ಕೋರಿದ್ದರು. ಈ ಬಗ್ಗೆ ಸರ್ಕಾರದ ದಿನಾಂಕ:8–12–2005ರ ಪತ್ರದಲ್ಲಿ ಅನುಬಂಧ–3ರ ದಾಖಲಾತಿಗಳ ಪ್ರತಿಗಳೆಲ್ಲವನ್ನು ಒದಗಿಸಲು ಸಾಧ್ಯವಿರುವುದಿಲ್ಲವಾದ್ದರಿಂದ ಕಂದಾಯ ಇಲಾಖೆಗೆ ಖುದ್ದಾಗಿ ಬಂದು ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲು ಲಿಖಿತ ಉತ್ತರವನ್ನು ಸಲ್ಲಿಸಲು 15 ದಿನಗಳ ಕಾಲಾವಕಾಶ ನೀಡಲಾಗಿತ್ತು. ಶ್ರೀ ಎಸ್.ಡಿ.ಘೀವಾರಿರವರು ಮೇಲೆ ಕ್ರ.ಸಂ.(4)ರ ದಿನಾಂಕ

21–12–2005ರಲ್ಲಿ ಸಲ್ಲಿಸಿರುವ ಲಿಖಿತ ಉತ್ತರದಲ್ಲಿ ಅದರ ಮೇಲಿನ ಆರೋಪಗಳನ್ನು ನಿರಾಕರಿಸಿ ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ. ಶ್ರೀ ಎಸ್.ಡಿ.ಘೀವಾರಿರವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಕಾಯ್ದಿರಿಸಿ, ಮೇಲೆ ಕ್ರ.ಸಂ.(5)ರಲ್ಲಿ ಓದಲಾದ ದಿನಾಂಕ: 24–01–2005ರ ಆದೇಶದಲ್ಲಿ ಸದರಿಯವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಲಾಗಿತ್ತು.

ಶ್ರೀ ಎಸ್.ಡಿ.ಘೀವಾರಿರವರು ಸಲ್ಲಿಸಿದ ಲಿಖಿತ ಉತ್ತರಗಳನ್ನು ಪರಿಶೀಲಿಸಲಾಗಿ ಒಪ್ಪಲು ಸಮರ್ಪಕ ಅಂಶಗಳಿರುವುದಿಲ್ಲ ಮತ್ತು ಅವರು ಆರೋಪಿತ ದುರ್ನಡತೆಗಳನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಆದ್ದರಿಂದ ಅವರ ವಿರುದ್ಧ ಹೊರಡಿಸಲಾದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಮೇಲೆ ಓದಲಾದ ಕ್ರ.ಸಂ.(6)ರ ದಿನಾಂಕ: 21–07–2006ರ ಆದೇಶದಲ್ಲಿ ಶ್ರೀ ಎಸ್.ಎಸ್.ಧಾರವಾಡಕರ್, ನಿವೃತ್ತ ನ್ಯಾಯಾಧೀಶಕರು, ಬಾಗಲಕೋಟೆ ಇವರನ್ನು ವಿಚಾರಣಾಧಿಕಾರಿ ಹಾಗೂ ಬಾಗಲಕೋಟೆ ಜಿಲ್ಲಾಧಿಕಾರಿಗಳ ಕಚೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. ಮೇಲೆ ಕ್ರ.ಸಂ(7)ರಲ್ಲಿ ಓದಲಾದ ದಿನಾಂಕ:21–02–2007ರ ಆದೇಶದಲ್ಲಿ, ಶ್ರೀ ಎಸ್.ಡಿ.ಘೀವಾರಿ, ಹಿಂದಿನ ತಹಶೀಲ್ದಾರ್, ಬಾಗಲಕೋಟೆ ಹಾಗೂ ಭೂ ನ್ಯಾಯಮಂಡಳಿ, ಬಾಗಲಕೋಟೆ ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಾಮವಳಿ ನಿಯಮ 11ರಡಿಯಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಶ್ರೀ ಎಸ್.ಎಸ್.ಧಾರವಾಡಕರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುವುದನ್ನು ಮಾರ್ಪಡಿಸಿ, ಶ್ರೀ ಎಂ.ಎನ್.ಗದಗ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಹಾಗೂ ಪ್ರಕರಣದ ಮಂಡನಾಧಿಕಾರಿಯಾಗಿ ದಿನಾಂಕ: 21–07–2006ರ ಆದೇಶದಲ್ಲಿರುವುದನ್ನು ಮುಂದುವರೆಸಿ ಆದೇಶಿಸಿದೆ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 11 ಮತ್ತು 11(ಎ) ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ವಿಚಾರಣೆ ಜರುಗಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು.

ವಿಚಾರಣಾ ಪ್ರಾಧಿಕಾರಿಗಳು ಮೇಲೆ (8) ರಲ್ಲಿ ಓದಲಾದ ದಿನಾಂಕ: 24–03–2008ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಆಪಾದಿತರ ವಿರುದ್ಧದ ಎಲ್ಲಾ ಆಪಾದನೆಗಳು ಸಾಬೀತಾಗಿರುವುದಾಗಿ, ವರದಿ ನೀಡಿರುತ್ತಾರೆ. ಸರ್ಕಾರವು ವಿಚಾರಣಾ ವರದಿಯನ್ನು ಪರಿಶೀಲಿಸಿ, ಶ್ರೀ ಎಸ್.ಡಿ.ಘೀವಾರಿ ಇವರಿಗೆ ಎರಡನೇ ಕಾರಣ ನೋಟೀಸನ್ನು ಮೇಲೆ ಓದಲಾದ (9)ರಲ್ಲಿ ಜಾರಿ ಮಾಡಲಾಗಿತ್ತು. ಅದರಂತೆ ಮೇಲೆ ಓದಲಾದ (10)ರಲ್ಲಿ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿ ಹಾಗೂ ಆಪಾದಿತರ ಹೇಳಿಕೆಯನ್ನು ಪರಿಶೀಲಿಸಿ, ಅವರಿಗೆ ನಿವೃತ್ತ ವೇತನದಲ್ಲಿ ಶೇಕಡ 5ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ತೀರ್ಮಾನಿಸಲಾಗಿದೆ. ಮೇಲೆ ಓದಲಾದ ಕ್ರ.ಸಂ.(11)ರ ದಿನಾಂಕ:27/23–01–2009 ಮತ್ತು ದಿನಾಂಕ: 26–03–2009ರ ಪತ್ರಗಳಲ್ಲಿ ದಂಡನೆ ವಿಧಿಸುವ ಪೂರ್ವದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆಯಲು ಕೋರಲಾಗಿತ್ತು. ಮೇಲೆ ಓದಲಾದ (12)ರ ದಿನಾಂಕ:16.05.2009 ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಶ್ರೀ ಎಸ್.ಡಿ.ಘೀವಾರಿ, ಹಿಂದಿನ ತಹಶೀಲ್ದಾರ್ (ಪ್ರಸ್ತುತ ನಿವೃತ್ತರು) ಇವರ ನಿವೃತ್ತಿ ವೇತನ ಶೇಕಡ 5% ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ಸಹಮತಿ ನೀಡಿರುತ್ತದೆ. ಈ ಹಿನ್ನೆಲೆಯಲ್ಲಿ ಶ್ರೀ ಎಸ್.ಡಿ.ಘೀವಾರಿ, ನಿವೃತ್ತ ತಹಶೀಲ್ದಾರ್, ಇವರಿಗೆ ಲೋಕಸೇವಾ ಆಯೋಗವು ನೀಡಿದ ಸಹಮತಿಯ ಹಿನ್ನೆಲೆಯಲ್ಲಿ ದಂಡನೆ ವಿಧಿಸುವ ಬಗ್ಗೆ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ.46.ಎಡಿಇ:2004 ಬೆಂಗಳೂರು, ದಿನಾಂಕ: 22ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯಾದ ಶ್ರೀ ಎಂ.ಎನ್.ಗದಗ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರು ಸರ್ಕಾರಕ್ಕೆ ಸಲ್ಲಿಸಿದ ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 214(1)(ಎ) ರನ್ವಯ ಶ್ರೀ ಎಸ್.ಡಿ.ಘೀವಾರಿ, ನಿವೃತ್ತ ತಹಶೀಲ್ದಾರ್ ಇವರಿಗೆ ಇವರ ನಿವೃತ್ತಿ ವೇತನದ ಶೇಕಡ 5 ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1770

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ(ಸೇವೆಗಳು–3)

**ವಿಷಯ:** 2009–10ನೇ ಸಾಲಿನಲ್ಲಿ ಭಾರಿ ಮಳೆ ಹಾಗೂ ಪ್ರವಾಹದ ವಿಕೋಪಗಳಿಗೆ ತುರ್ತು ಪರಿಹಾರ ಕ್ರಮಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2009ನೇ ಜುಲೈ ತಿಂಗಳಲ್ಲಿ ಬಿದ್ದ ಬಾರಿ ಮಳೆಯಿಂದ ಪ್ರವಾಹ ಪರಿಸ್ಥಿತಿ ಉಂಟಾಗಿ ಮೈಸೂರು ಜಿಲ್ಲೆಯಲ್ಲಿ ಮಾನವ ಜೀವಹಾನಿ, ಜಾನುವಾರು ಹಾನಿ, ಮನೆಹಾನಿ, ಬೆಳೆಹಾನಿ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಾನಿ ಉಂಟಾಗಿದೆ. ಹಾಗೂ ಕೆಲವೊಂದು ಪ್ರದೇಶಗಳಲ್ಲಿ ಮಳೆ ಕೊರತೆಯಿಂದ ಕುಡಿಯುವ ನೀರು ಹಾಗೂ ಮೇವು ಸರಬರಾಜು ಮಾಡುವ ಅವಶ್ಯಕತೆ ಕಂಡುಬಂದಿದೆ. ಇಂತಹ ಹಾನಿಗೆ ತುರ್ತು ಪರಿಹಾರ ಕೈಗೊಳ್ಳಲು ಹಣ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶದ ಸಂಖ್ಯೆ: ಕಂಇ 137 ಟಿಎನ್‌ಆರ್ 2009, ಬೆಂಗಳೂರು, ದಿನಾಂಕ: 17ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಮೈಸೂರು ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ರೂ.50.00 ಲಕ್ಷ (ರೂ.ಐವತ್ತು ಲಕ್ಷಗಳು ಮಾತ್ರ) ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು.

a) ಮಾನವ/ ಪ್ರಾಣಿ ಜೀವಹಾನಿ

b) ಮನೆ ಹಾನಿ

c) ಬೆಳೆ ಹಾನಿ

d) ಕುಡಿಯುವ ನೀರು ಸರಬರಾಜು

e) ಮೇವು ಸರಬರಾಜು

f) ಹಾನಿಗೊಳಗಾದ ಮೂಲಭೂತ ಸೌಕರ್ಯಗಳ ತುರ್ತು ರಿಪೇರಿ

2) ಕೇಂದ್ರ ಸರ್ಕಾರವು ದಿನಾಂಕ: 27–06–2007ರಂದು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು

3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಸಿಆರ್‌ಎಫ್/ ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್ ಪಿ.ಡಿ.ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–104–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 692 ವೆಚ್ಚ–7/2009 ದಿನಾಂಕ: 17–07–2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ದೇಸಾಯಿ**

ಪಿ.ಆರ್. 1772

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ ಮತ್ತು ಸೇವೆಗಳು)

**ವಿಷಯ:** ಶ್ರೀ ಅರ್ಜುನ್ ಕಟ್ಟಿಮನಿ, ತಹಶೀಲ್ದಾರ್, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಗುಲ್ಬರ್ಗಾ ಇವರ ನಿವೃತ್ತಿ ಸೌಲಭ್ಯಗಳನ್ನು ತಡೆ ಹಿಡಿಯುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ಲೋಕಾಯುಕ್ತರವರ ಪತ್ರ ಸಂ: ಲೋಕ್/ಇಎನ್‌ವಿ (ಜಿ)33/ಸಿಆರ್ 8/96 ಜಿಎಲ್‌ಬಿ, ದಿನಾಂಕ: 29–05–96,09–09–96 ಮತ್ತು 20–10–97.

2. ಸರ್ಕಾರದ ಆದೇಶ ಸಂ: ಆರ್‌ಡಿ 82 ಎಡಿಇ 97, ದಿನಾಂಕ: 18–11–97.

3. ಆರಕ್ಷಕ ಮಹಾನಿರೀಕ್ಷಕರು, ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ: ಲೋಕ್/ಐಎನ್‌ವಿ (ಜಿ) 33/ಸಿಆರ್–8/96 ಜಿಎಲ್‌ಬಿ, ದಿನಾಂಕ: 19–01–2004

4. ಗುಲ್ಬರ್ಗಾ ವಿಶೇಷ ಸತ್ರ ನ್ಯಾಯಾಲಯದ ತೀರ್ಪು ದಿನಾಂಕ: 17–11–2003.
5. ಕಾರಣ ಕೇಳುವ ನೋಟೀಸು ಸಂ: ಆರ್‌ಡಿ 16 ಎಡಿಇ 2004, ದಿನಾಂಕ: 06–10–2008.
6. ಶ್ರೀ ಅರ್ಜುನ್ ಕಟ್ಟಿಮನಿ, ನಿವೃತ್ತ ತಹಶೀಲ್ದಾರ್ ಇವರ ಲಿಖಿತ ಸಮಜಾಯಿಸಿ ದಿನಾಂಕ:26.11.2008.

**ಪ್ರಸ್ತಾವನೆ:**

ಶ್ರೀ ಅರ್ಜುನ್ ಕಟ್ಟಿಮನಿ, ತಹಶೀಲ್ದಾರ್, (ಈಗ ನಿವೃತ್ತರು) ಇವರು ನಿಯೋಜನೆ ಮೇಲೆ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಸದರಿಯವರು ದಿನಾಂಕ: 21–05–90 ರಂದು ಲೋಕಾಯುಕ್ತ ಬಲೆಗೆ ಸಿಕ್ಕಿಬಿದ್ದಿರುವುದಾಗಿ, ಮೇಲೆ ಓದಲಾದ ಕ್ರ.ಸಂ.(1)ರಲ್ಲಿ ಸದರಿಯವರ ವಿರುದ್ಧ ಸಕ್ಷಮ ಪ್ರಾಧಿಕಾರದಲ್ಲಿ ಮೊಕದ್ದಮೆ ಹೂಡಲು ಡೈರೆಕ್ಟರ್ ಜನರಲ್, ತನಿಖಾ ದಳ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರದ ಅನುಮತಿಯನ್ನು ಕೋರಿದ್ದರು.

ಶ್ರೀ ಎ.ಜೆ.ಕಟ್ಟಿಮನಿ, ತಹಶೀಲ್ದಾರ್ (ಪ್ರಸ್ತುತ ನಿವೃತ್ತ) ರವರು ನಿಯೋಜನೆ ಮೇಲೆ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅಕ್ರಮ ಸಂಭಾವನೆ ಸ್ವೀಕರಿಸುವಾಗ ಲೋಕಾಯುಕ್ತರ ಬಲೆಗೆ ಸಿಕ್ಕಿಬಿದ್ದಿದ್ದು, ತದನಂತರ ಲೋಕಾಯುಕ್ತರ ಶಿಫಾರಸ್ಸಿನಂತೆ ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಮೇಲೆ ಓದಲಾದ ಕ್ರ.ಸಂ.(2) ರ ಆದೇಶದಲ್ಲಿ ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರ.ಸಂ.(3) ರಲ್ಲಿನ ದಿನಾಂಕ: 19–01–2004ರಲ್ಲಿ ಪತ್ರದಲ್ಲಿ ಆರಕ್ಷಕ ಮಹಾನಿರೀಕ್ಷಕರು, ಲೋಕಾಯುಕ್ತರು, ಬೆಂಗಳೂರುರವರು ಶ್ರೀ ಅರ್ಜುನ್ ಕಟ್ಟೀಮನಿ, ತಹಶೀಲ್ದಾರ್, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಗುಲ್ಬರ್ಗಾ ಇವರನ್ನು ಗುಲ್ಬರ್ಗಾ ವಿಶೇಷ ನ್ಯಾಯಾಲಯದ ವಿಶೇಷ ಪ್ರಕರಣ ಸಂ: 28/98 ರಲ್ಲಿ ಅಭಿಯೋಜನೆಗೊಳಿಸಲಾಗಿತ್ತು. ಸದರಿ ಪ್ರಕರಣದ ವಿಚಾರಣೆ ನಡೆಸಿದ ಮಾನ್ಯ ಸತ್ರ ನ್ಯಾಯಾಧೀಶರು, ಗುಲ್ಬರ್ಗಾರವರು ದಿನಾಂಕ: 17–11–2003ರಂದು ತೀರ್ಪು ನೀಡಿ ಆರೋಪಿತರಿಗೆ ಕಲಂ 7 ಪಿ.ಸಿ.ಕಾಯ್ದೆ ಅಡಿಯಲ್ಲಿ 2 ವರ್ಷಗಳ ಕಠಿಣ ಶಿಕ್ಷೆ ಹಾಗು 3,000/ ರೂ.ಗಳ ದಂಡವನ್ನು ತಪ್ಪಿದ್ದಲ್ಲಿ 3 ತಿಂಗಳ ಕಠಿಣ ಶಿಕ್ಷೆ ಮತ್ತು ಕಲಂ 13(2) ರ ಪಿ.ಸಿ.ಕಾಯ್ದೆ ಅಡಿಯಲ್ಲಿ ಒಂದು ವರ್ಷ ಕಠಿಣ ಶಿಕ್ಷೆ ಹಾಗೂ ದಂಡ 1,000/–ರೂಗಳು ತಪ್ಪಿದಲ್ಲಿ ಒಂದು ತಿಂಗಳ ಕಠಿಣ ಶಿಕ್ಷೆಯನ್ನು ವಿಧಿಸಿರುತ್ತದೆ ಎಂದು ತಿಳಿಸುತ್ತಾ,

ಸದರಿ ಆರೋಪಿಯು ಮೇಲೆ ವಿವರಿಸುವಂತೆ ಶಿಕ್ಷೆಗೆ ಒಳಗಾಗಿರುವುದರಿಂದ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14 ಮತ್ತು 10(2)ರ ಪ್ರಕಾರ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಅರ್ಜುನ್ ಕಟ್ಟೀಮನಿ, ತಹಶೀಲ್ದಾರ್, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಗುಲ್ಬರ್ಗಾ ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ ನಿಯಮಾವಳಿಯಂತೆ ಸೂಕ್ತ ಕ್ರಮಕೈಗೊಳ್ಳಲು ಕೋರಲಾಗಿದೆ. ಆರೋಪಿತರು ಈಗಾಗಲೇ ನಿವೃತ್ತಿ ಆಗಿದ್ದಲ್ಲಿ ಇವರ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯುವ ಬಗ್ಗೆ ನಿಯಮಾವಳಿಯಂತೆ ಕ್ರಮಕೈಗೊಳ್ಳಲು ಕೋರಲಾಗಿತ್ತು.

ಮೇಲೆ ಓದಲಾದ ಕ್ರ.ಸಂ(4)ರಲ್ಲಿ ಶ್ರೀ ಅರ್ಜುನ್ ಕಟ್ಟಿಮನಿ, ತಹಶೀಲ್ದಾರ್ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಗುಲ್ಬರ್ಗಾ ಇವರನ್ನು ಗುಲ್ಬರ್ಗಾ ವಿಶೇಷ ನ್ಯಾಯಾಲಯದ ವಿಶೇಷ ಪ್ರಕರಣ ಸಂ: 28/98ರಲ್ಲಿ ಅಭಿಯೋಜನೆಗೊಳಿಸಲಾಗಿತ್ತು. ಸದರಿ ಪ್ರಕರಣದ ವಿಚಾರಣೆ ನಡೆಸಿದ ಮಾನ್ಯ ವಿಶೇಷ ಸತ್ರ ನ್ಯಾಯಾಧೀಶರು, ಗುಲ್ಬರ್ಗಾರವರು ದಿನಾಂಕ: 17–11–2003ರಂದು ತೀರ್ಪು ನೀಡಿ ಆರೋಪಿತರಿಗೆ ಕಲಂ 7 ಪಿ.ಸಿ.ಕಾಯ್ದೆ ಅಡಿಯಲ್ಲಿ 2 ವರ್ಷಗಳ ಕಠಿಣ ಶಿಕ್ಷೆ ಹಾಗೂ 3,000/– ರೂ.ಗಳ ದಂಡವನ್ನು ತಪ್ಪಿದಲ್ಲಿ 3 ತಿಂಗಳ ಕಠಿಣ ಶಿಕ್ಷೆ ಮತ್ತು ಕಲಂ 13(2) ರ ಪಿ.ಸಿ.ಕಾಯ್ದೆ ಅಡಿಯಲ್ಲಿ ಒಂದು ವರ್ಷ ಕಠಿಣ ಶಿಕ್ಷೆ ಹಾಗೂ ದಂಡ 1,000/– ರೂ.ಗಳ ತಪ್ಪಿದಲ್ಲಿ ಒಂದು ತಿಂಗಳ ಕಠಿಣ ಶಿಕ್ಷೆಯನ್ನು ವಿಧಿಸಿರುತ್ತದೆ.

ಮೇಲೆ ಓದಲಾದ ಕ್ರ.ಸಂ(5) ರಲ್ಲಿ ಸದರಿ ನಿವೃತ್ತ ಅಧಿಕಾರಿಯವರಿಗೆ ನ್ಯಾಯಾಲಯದ ತೀರ್ಪಿನ ಆದೇಶದಂತೆ ದಂಡನೆ ವಿಧಿಸುವ ಬಗ್ಗೆ ಲಿಖಿತ ಸಮಜಾಯಿಸಿ ನೀಡುವಂತೆ ವಿಚಾರಣಾ ವರದಿಯೊಂದಿಗೆ ಕಾರಣ ಕೇಳುವ ನೋಟೀಸು ಜಾರಿಗೊಳಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ.(6)ರಲ್ಲಿ ಆಪಾದಿತರು ನೋಟಿಸಿಗೆ ಸಮಜಾಯಿಸಿ ನೀಡಿ ನ್ಯಾಯಾಲಯದ ದಂಡನಾ ಆದೇಶಕ್ಕೆ ತಡೆಯಾಜ್ಞೆ ಇರುವುದರಿಂದ ನ್ಯಾಯಾಲಯದ ತೀರ್ಮಾನದವರೆಗೆ ದಂಡನೆ ವಿಧಿಸಬಾರದೆಂದು ಕೋರಿದ್ದಾರೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸುತ್ತೋಲೆ ಸಂ: ಸಿಆಸುಇ 9 ಸೇಇವಿ 95, ದಿನಾಂಕ: 26.06.96 ರಲ್ಲಿ ಕ್ರಿಮಿನಲ್ ನ್ಯಾಯಾಲಯದಲ್ಲಿ ವಿಚಾರಣೆಗೆ ಒಳಪಟ್ಟ ಅಪರಾಧಕ್ಕಾಗಿ ದಂಡನೆಗೆ ಗುರಿಯಾದ ಸರ್ಕಾರಿ ನೌಕರನ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ಮಾರ್ಗಸೂಚಿ ನೀಡಿದೆ. ಅದರಲ್ಲಿ ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದಲ್ಲಿ, ದಂಡನೆಗೊಳಗಾದ ಸರ್ಕಾರಿ ನೌಕರನು ಆ ನ್ಯಾಯಾಲಯವು ತನಗೆ ವಿಧಿಸಿದ ದಂಡನೆಯ ವಿರುದ್ಧ ಸಮರ್ಥ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿ, ಕೆಳಗಿನ ನ್ಯಾಯಾಲಯದ ದಂಡನಾ ಆದೇಶಕ್ಕೆ ತಡೆಯಾಜ್ಞೆ ಪಡೆದುಕೊಂಡಾಗಲಾಗಲೀ

ಅಥವಾ ವೈಯಕ್ತಿಕ ಜಾಮೀನಿನ ಮೇಲೆ ಬಿಡುಗಡೆ ಆದೇಶ ಪಡೆದುಕೊಂಡಾಗಲಾಗಲೀ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(i)ರ ಅವಕಾಶಗಳನ್ನು ಜಾರಿಗೊಳಿಸಬಹುದಾದ ಸಾಧ್ಯತೆಯನ್ನು ಸರ್ವೋಚ್ಚ ನ್ಯಾಯಾಲಯವು ಕಾಲೇಜು ಶಿಕ್ಷಣ ಉಪನಿರ್ದೇಶಕರು (ಆಡಳಿತ) ಮದ್ರಾಸ್ ವಿರುದ್ಧ ಎಸ್.ನಾಗೂರ ಮೀರ ಪ್ರಕರಣದಲ್ಲಿ (ಎಐಆರ್ 1995 ಎಸ್‌ಸಿ 1364) ನೀಡಿರುವ ತೀರ್ಪಿನ ಬೆಳಕಿನಲ್ಲಿ ಪರಿಶೀಲಿಸಿ, ಸರ್ಕಾರವು ಮಾರ್ಗಸೂಚಿ ಅನ್ವಯ ಶಿಸ್ತಿನ ಕ್ರಮ ಕೈಗೊಳ್ಳತಕ್ಕದ್ದು ಎಂದು ತಿಳಿಸಲಾಗಿದೆ. ಆದ್ದರಿಂದ ನ್ಯಾಯಾಲಯದ ತೀರ್ಮಾನಕ್ಕೆ ಕಾಯದೆ ದಂಡನೆ ವಿಧಿಸಬಹುದು. ಈ ಹಿನ್ನೆಲೆಯಲ್ಲಿ, ಲೋಕಾಯುಕ್ತರ ಶಿಫಾರಸ್ಸಿನ ಮೇರೆಗೆ ಸರ್ಕಾರವು ದಂಡನೆ ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಕಂಇ 16 ಎಡಿಇ, ಬೆಂಗಳೂರು, ದಿನಾಂಕ: 17ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಅರ್ಜುನ್ ಕಟ್ಟೀಮನಿ (ನಿವೃತ್ತ) ತಹಶೀಲ್ದಾರ್ ಇವರ ನಿವೃತ್ತಿ ಸೌಲಭ್ಯಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಶಾಶ್ವತವಾಗಿ ಕಡಿತಗೊಳಿಸಲಾಗಿದೆ ಎಂದು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1773

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಬಿ.ಹೆಚ್.ಕೃಷ್ಣಪ್ಪ, ಕಚೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಚೇರಿ, ಶಿವಮೊಗ್ಗ ಇವರಿಗೆ ಸಾಮಾನ್ಯ ಭವಿಷ್ಯ ನಿಧಿ ಖಾತೆಯಿಂದ ಭಾಗಶಃ ಮೊಬಲಗು ಹಿಂದಕ್ಕೆ ಪಡೆಯಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂ: ಪ್ರಾಆಕ: ಇಎಸ್‌ಟಿ (4):ಸಿಆರ್,10/08–09, ದಿನಾಂಕ:19–03–09.
2. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಪತ್ರ ಸಂ: ಎಸಿಟಿ (4) ಜಿಪಿಎಫ್/ವಿವ/20/08–09, ದಿನಾಂಕ:30–12–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ (1), ದಿನಾಂಕ 19–03–2009ರ ಪ್ರಸ್ತಾವನೆಯಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಇವರು ಶ್ರೀ ಬಿ.ಹೆಚ್.ಚಿಕ್ಕಪ್ಪ, ಹಿಂದಿನ ಶಿರಸ್ತೇದಾರರು, ಹೊಸನಗೆ, ತಾಲೂಕು ಕಚೇರಿ, ಪ್ರಸ್ತುತ ಕಚೇರಿಯ ಸಹಾಯಕರು, ಜಿಲ್ಲಾಧಿಕಾರಿಗಳ ಕಚೇರಿ, ಶಿವಮೊಗ್ಗರವರ ಕೋರಿಕೆಯಂತೆ ಅವರ ಮಗಳ ಮದುವೆ ಕಾರಣ ಜಿ.ಪಿ.ಎಫ್ ಖಾತೆ ಸಂ: ಜಿಎ 123106 ರಿಂದ ರೂ.1,80,000/–ಗಳನ್ನು ಭಾಗಶಃ ಹಿಂದಕ್ಕೆ ಪಡೆಯಲು ಜಿಪಿಎಫ್ ನಿಯಮ 27(ಎ) ರಂತೆ ಮಂಜೂರಾತಿ ನೀಡುವಂತೆ ಶಿಫಾರಸು ಮಾಡಿ ಸದರಿಯವರ ಜಿ.ಪಿ.ಎಫ್ ಖಾತೆಯಲ್ಲಿ ಅಕ್ಟೋಬರ್ 2008ರ ಅಂಶಕ್ಕೆ ರೂ.2,63,701–00 ಮೊಬಲಗು ಠೇವಣಿ ಇರುತ್ತದೆ. ಆದ್ದರಿಂದ ಶ್ರೀ ಬಿ.ಹೆಚ್.ಚಿಕ್ಕಪ್ಪ ಇವರಿಗೆ ಶೇಕಡ 75ರಷ್ಟು ಮಿತಿಗೆ ಒಳಪಟ್ಟು ಭಾಗಶಃ ಮೊಬಲಗು ಹಿಂದಕ್ಕೆ ಪಡೆಯಲು ನಿಯಮಾನುಸಾರ ಮಂಜೂರಾತಿ ನೀಡುವಂತೆ ಕೋರಿ ಮೇಲೆ ಓದಲಾದ ಕ್ರ.ಸಂ(2) ದಿನಾಂಕ: 30–12–2008ರ ಪ್ರತಿ ಹಾಗೂ ಅಧಿಕಾರಿಗಳ ಅರ್ಜಿ ನಮೂನೆಗಳೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಾದೇಶಿಕ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಬಿ.ಹೆಚ್.ಚಿಕ್ಕಪ್ಪ, ಕಚೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಚೇರಿ, ಶಿವಮೊಗ್ಗ ಇವರಿಗೆ ಅವರ ಜಿಪಿಎಫ್ ಖಾತೆಯಿಂದ ಭಾಗಶಃ ಮೊಬಲಗು ಹಿಂದಕ್ಕೆ ಪಡೆಯಲು ಮಂಜೂರಾತಿ ನೀಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 292 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 29ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಬಿ.ಹೆಚ್.ಚಿಕ್ಕಪ್ಪ, ಕಚೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಚೇರಿ, ಶಿವಮೊಗ್ಗ ಇವರ ಜಿಪಿಎಫ್ ಖಾತೆ ಸಂ:ಜಿಎ 123106 ರಿಂದ ರೂ.1,80,000/–ಗಳ (ರೂ.ಒಂದು ಲಕ್ಷ ಎಂಬತ್ತು ಸಾವಿರ ರೂ.ಗಳು ಮಾತ್ರ) ಮೊಬಲಗನ್ನು ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮ 27(ಬಿ) ಯನ್ನು ಸಡಿಲಿಸಿ ನಿಯಮ 27(ಇ)ರ ಪ್ರಕಾರ ಅವರ ಮಗಳ ಮದುವೆಯ ವೆಚ್ಚವನ್ನು ಭರಿಸುವ ಉದ್ದೇಶಕ್ಕಾಗಿ ಭಾಗಶಃ ಹಿಂದಕ್ಕೆ ಪಡೆಯಲು ಮಂಜೂರಾತಿ ನೀಡಿ ಆದೇಶಿಸಿದೆ.

ಮೇಲ್ಕಂಡ ಹಣವನ್ನು ಸದುಪಯೋಗ ಪಡಿಸಿಕೊಂಡ ಬಗ್ಗೆ ದೃಡೀಕರಣ ಪತ್ರ ನೀಡುವಂತೆ ಸಹಾ ಸದರಿ ಅಧಿಕಾರಿಗೆ ನಿರ್ದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 582, ವೆಚ್ಚ–7/2009, ದಿನಾಂಕ:29–06–2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1881

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಚಿಂತಾಮಣಿ ಮೇಂಗಜಿ, ತಹಶೀಲ್ದಾರ್, ಗ್ರೇಡ್–II ಪ್ರಸ್ತುತ ನಿಯೋಜನೆ ಮೇಲೆ ಉಪ ಪ್ರಾಚಾರ್ಯರು, ಡಿ.ಟಿ.ಐ. ಗುಲ್ಬರ್ಗಾ ಜಿಲ್ಲೆ ಇವರಿಗೆ ದಿನಾಂಕ: 01–02–2009ರಿಂದ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರ ಪ್ರಸ್ತಾವನೆ ಸಂ: ಸಿಬ್ಬಂದಿ:2 ವಿವ: 30/2009–10, ದಿನಾಂಕ:18–05–2009.

2) ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಗುಲ್ಬರ್ಗಾ ಇವರ ಪತ್ರ ಸಂ:ಜಿತಸಂ/ಸಿಬ್ಬಂದಿ/15/2008–09/95, ದಿನಾಂಕ:05–05–2009.

**ಪ್ರಸ್ತಾವನೆ:**

ಮೇಲೆ (1) ಮತ್ತು (2)ರಲ್ಲಿ ಓದಲಾದ ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಮತ್ತು ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಗುಲ್ಬರ್ಗಾ ಇವರ ಪ್ರಸ್ತಾವನೆಯಲ್ಲಿ ಶ್ರೀ ಚಿಂತಾಮಣಿ ಮೇಂಗಜಿ, ತಹಶೀಲ್ದಾರ್, ಪ್ರಸ್ತುತ ನಿಯೋಜನೆ ಮೇಲೆ ಉಪ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಗುಲ್ಬರ್ಗಾ ಗ್ರೇಡ್–II ಇವರು ವೇತನ ಶ್ರೇಣಿ ರೂ.11,400–21,600 ರಲ್ಲಿ ದಿನಾಂಕ:01–02–2009ರಂದು ಗರಿಷ್ಠ ಹಂತ ತಲುಪಿದ್ದು, ದಿನಾಂಕ:01–02–2009ರಂದು ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಪಡೆಯಲು ಅರ್ಹರಿರುವುದಾಗಿ, ಇವರ ವಿರುದ್ಧ ಯಾವುದೇ ಶಿಸ್ತು ಕ್ರಮ ಪ್ರಕರಣಗಳು ಬಾಕಿ ಇರುವುದಿಲ್ಲ ಹಾಗೂ ಸೇವೆಯು ತೃಪ್ತಿಕರವಾಗಿದೆಯೆಂದು ಮೇಲೆ (2)ರಲ್ಲಿ ಓದಲಾದ ಪ್ರಾಚಾರ್ಯರು ಜಿಲ್ಲಾ ತರಬೇತಿ ಸಂಸ್ಥೆ, ಗುಲ್ಬರ್ಗಾರವರು ವರದಿ ಮಾಡಿರುವಂತೆ ವೇತನ ಶ್ರೇಣಿ ರೂ.11,400–21,600 ರಲ್ಲಿ ದಿನಾಂಕ: 01–02–2009 ರಂದು ಮೊದಲನೇ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಬೇಕಾಗುತ್ತದೆ ಎಂದು ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಮತ್ತು ಪ್ರಾಚಾರ್ಯರು ಜಿಲ್ಲಾ ತರಬೇತಿ ಸಂಸ್ಥೆ, ಗುಲ್ಬರ್ಗಾ ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಶ್ರೀ ಚಿಂತಾಮಣಿ ಮೆಂಗಜಿ, ಉಪ ಪ್ರಾಚಾರ್ಯರು (ತಹಶೀಲ್ದಾರ್ ಗ್ರೇಡ್–II) ಇವರಿಗೆ ವೇತನ ಶ್ರೇಣಿ ರೂ.11,400–21,600 ಗಳಲ್ಲಿ ದಿನಾಂಕ:01–02–2009ರಂದು ಮೊದಲ ಸ್ಥಗಿತ ವೇತನ ಬಡ್ತಿಗೆ ಅರ್ಹರಾಗಿರುವುದರಿಂದ ಸದರಿ ವೇತನ ಬಡ್ತಿಯನ್ನು ಮಂಜೂರು ಮಾಡಬೇಕಾಗಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 339 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಚಿಂತಾಮಣಿ ಮೆಂಗಜಿ, ತಹಶೀಲ್ದಾರ್, ಪ್ರಸ್ತುತ ನಿಯೋಜನೆ ಮೇಲೆ ಉಪ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಗುಲ್ಬರ್ಗಾ (ತಹಶೀಲ್ದಾರ್ ಗ್ರೇಡ್–II) ಇವರಿಗೆ ವೇತನ ಶ್ರೇಣಿ ರೂ.11,400–21,600 ರಲ್ಲಿ ದಿನಾಂಕ: 01–02–2009ರಿಂದ ಜಾರಿಗೆ ಬರುವಂತೆ ಮೊದಲನೇ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1992

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಕೆಎಎಸ್ ಅಧಿಕಾರಿಗಳಿಗೆ ತಹಶೀಲ್ದಾರರ ವೃಂದದಲ್ಲಿ ಕಾಲಮಿತಿ ವೇತನ ಬಡ್ತಿ ಹಾಗೂ ಸ್ವಯಂ ಚಾಲಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂ: ಸಿಆಸುಇ 03 ಎಸ್‌ಕೆಜಿ 2000, ದಿನಾಂಕ: 04–03–2006

2) ಅಧಿಕಾರಿಗಳ ಮನವಿಗಳು.

3) ಮಹಾಲೇಖಪಾಲರ (ಎ&ಇ) ಅವರ ಪತ್ರ ಸಂ: ಜಿಇ–1/ಆರ್–2/2007–08/198, ದಿನಾಂಕ:21.05.2007.

4) ಸರ್ಕಾರದ ಆದೇಶ ಸಂ: ಕಂಇ 32 ಎಎಸ್‌ಡಿ 2004, ದಿನಾಂಕ: 29–04–2008

5) ಸರ್ಕಾರದ ಆದೇಶ ಸಂ: ಆರ್‌ಡಿ 242 ಎಎಸ್‌ಡಿ 2008, ದಿನಾಂಕ:21–10–2008 ಮತ್ತು 01.07.2009.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (2)ರ ಮನವಿಗಳಲ್ಲಿ, ಪ್ರಸಕ್ತ ಕೆ.ಎ.ಎಸ್ ಅಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿರುವ/ನಿವೃತ್ತರಾಗಿರುವ ಈ ಕೆಳಕಂಡ ಅಧಿಕಾರಿಗಳು ಮನವಿಗಳನ್ನು ಸಲ್ಲಿಸಿ ಅವರುಗಳು ತಹಶೀಲ್ದಾರ್ ವೃಂದಕ್ಕೆ ನೇರವಾಗಿ ಆಯ್ಕೆಯಾಗಿ ನಂತರ ಕೆ.ಎ.ಎಸ್ (ಕಿರಿಯ ಶ್ರೇಣಿ) ವೃಂದಕ್ಕೆ ಬಡ್ತಿ ಪಡೆದಿದ್ದಾಗಿ ತಿಳಿಸಿ, ತಾವುಗಳು ತಹಶೀಲ್ದಾರರ

ವೃಂದದಲ್ಲಿಯೇ ಸತತವಾಗಿ 15 ವರ್ಷಗಳಿಗೂ ಅಧಿಕ ಸೇವೆ ಸಲ್ಲಿಸಿರುವುದರಿಂದ ತಮಗೆ 10 ವರ್ಷದ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷದ ಸ್ವಯಂ ಚಾಲಿತ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿದ್ದರು.

**ಶ್ರೀಯುತರಾದ**

1. ಎಸ್.ತಹಸೀನ್ ಅಹಮದ್,
2. ವಿ.ಎ.ಮಜ್ಸೀದ್ ಹುಸ್ಸೇನ್
3. ಎಚ್.ವಿ.ಶ್ರೀನಿವಾಸ್‌ಮೂರ್ತಿ
4. ಕೆ.ತಿಮ್ಮೇಗೌಡ
5. ಖಾಜ ಫಹೀಮುದ್ದೀನ್ ಅಹಮದ್
6. ಎಸ್.ಸಿ.ಹನುಮಿನಾಳ್
7. ಸಯ್ಯದ್ ಆಲಿ ರಫ್ವಿ
8. ಪುಟ್ಟಮಾದಯ್ಯ
9. ಬಿ.ಹೀರಾನಾಯಕ್
10. ಜೆ.ಎಸ್.ವಿರೂಪಾಕ್ಷಯ್ಯ
11. ವಿ.ಎಸ್.ನೇಜ್ಞೂರ್
12. ಕೆ.ಮಲ್ಲಿನಾಥ್
13. ಎಚ್.ಎಂ.ಮುಜೀಬ್ ಅಹ್ಮದ್
14. ಜಿತೇಂದ್ರ ಸಿಂಗ್
15. ಆರ್.ಎಸ್.ಎಳುಮಲೈ
16. ಎಸ್.ಜಿ.ಬಿರಾದಾರ್
17. ಎಸ್.ಎ.ಮಠದ್
18. ಜಿ.ಸಿ.ರಾಜಶೇಖರ್
19. ಕೆ.ಕೃಷ್ಣೇಗೌಡ
20. ಎಲ್.ರಾಧಾಕೃಷ್ಣ
21. ವಿ.ಎಸ್.ನಾಯಕ್
22. ಅಹ್ಮದ್ ಹಸನ್
23. ಮಿರ್ಜಾ ಅಕ್ಬರುಲ್ಲಾ
24. ಎಂ.ವಿ.ಗೊಂಗಡ ಶೆಟ್ಟಿ
25. ಅಬ್ದುಲ್ ರಹೀಂ
26. ಕೆ.ಆರ್.ಜಯಪ್ರಕಾಶ್
27. ಎಸ್.ಶಿವಾನಂದ ಶರ್ಮ
28. ಕೆ.ಪ್ರಭುದೇವ್
29. ಮಹಮದ್ ಅಮಾನುಲ್ಲಾ ಷರೀಫ್
30. ಕೆ.ಎಚ್.ನಿಂಗೇಗೌಡ
31. ಎಸ್.ಮಹದೇವಯ್ಯ

ಮೇಲೆ ಓದಲಾದ ಕ್ರ.ಸಂ.(3), ದಿನಾಂಕ: 21–05–2007ರಲ್ಲಿ ಮಹಾಲೇಖಪಾಲರ ವರದಿಯಂತೆ, ಸರ್ಕಾರವು ಮೇಲ್ಕಂಡ ಕೆ.ಎ.ಎಸ್ ಅಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಮಹಾಲೇಖಪಾಲರ ವರದಿಯಂತೆ ಈಗಾಗಲೇ ಕೆ.ಎ.ಎಸ್ ಅಧಿಕಾರಿಗಳಿಗೆ ಟಿಬಿಎ ಅನ್ನು ಮಂಜೂರು ಮಾಡಿರುವುದನ್ನು ಹೊರತುಪಡಿಸಿದೆ.

ಈ ಹಿಂದೆ ಈಗಾಗಲೇ ಸರ್ಕಾರದ ಆದೇಶ ಸಂ: ಕಂಇ 250 ಎಎಸ್‌ಡಿ 2003, ದಿನಾಂಕ: 29–01–2004ರಲ್ಲಿ (1) ಶ್ರೀ ಜಿ.ಎಸ್.ವಿರೂಪಾಕ್ಷಯ್ಯ (2) ಶ್ರೀ ವಿ.ಎಸ್.ನೇಜ್ಞೂರ್ (3) ಶ್ರೀ ಕೆ.ಮಲ್ಲಿನಾಥ್ (ನಿವೃತ್ತ) ಮತ್ತು ಸರ್ಕಾರದ ಆದೇಶ ಸಂ: ಕಂಇ 227 ಎಎಸ್‌ಡಿ 2002, ದಿನಾಂಕ:07–10–2003ರಲ್ಲಿ ಶ್ರೀ ಎಸ್.ಶಿವನಂದ ಶರ್ಮ ಇವರುಗಳಿಗೆ ಸಂಬಂಧಿಸಿದಂತೆ ಟಿಬಿಎ ಹಾಗೂ ಎಜಿಎಸ್‌ಪಿಎಸ್‌ಎಸ್‌ಗಳನ್ನು ಮಂಜೂರು ಮಾಡಿ ಆದೇಶ ಹೊರಡಿಸಿರುವುದರಿಂದ ಮೇಲ್ಕಂಡ ನಾಲ್ಕು ಜನ ಅಧಿಕಾರಿಗಳನ್ನು ಹೊರತುಪಡಿಸಿ, ಇನ್ನುಳಿದ 27 ಕೆಎಎಸ್ ಅಧಿಕಾರಿಗಳಿಗೆ ಪ್ರಸ್ತಾವನೆಯನ್ನು ಅಧಿಕೃತ ಜ್ಞಾಪನ ಸಂ: ಎಫ್‌ಡಿ 01 ಎಸ್‌ಆರ್‌ಸಿ 85, ದಿನಾಂಕ: 22–01–85, ಕರ್ನಾಟಕ ನಾಗರೀಕ ಸೇವಾ (ಕಾಲಮಿತಿ ವೇತನ ಬಡ್ತಿ) ನಿಯಮಗಳ 1983 ಹಾಗೂ ಕರ್ನಾಟಕ ನಾಗರೀಕ ಸೇವಾ (ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು 1991ರ ಪ್ರಕಾರ ಪರಿಶೀಲಿಸಿ ಅರ್ಹ ಅಧಿಕಾರಿಗಳಿಗೆ 10 ವರ್ಷಗಳ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷಗಳ ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿಯನ್ನು ಮಂಜೂರು ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಕಂಇ 22ಎಎಸ್‌ಡಿ 2007, ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಕೆಎಎಸ್ ಅಧಿಕಾರಿಗಳಿಗೆ ತಹಶೀಲ್ದಾರ್ ವೃಂದದಲ್ಲಿ ಅವರುಗಳ ಹೆಸರಿನ ಮುಂದೆ ತಿಳಿಸಿದ ದಿನಾಂಕದಿಂದ ಜಾರಿಗೆ ಬರುವಂತೆ 10 ವರ್ಷಗಳ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷಗಳ ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿಯನ್ನು ಕರ್ನಾಟಕ ನಾಗರೀಕ ಸೇವಾ (ಕಾಲಮಿತಿ, ವೇತನ ಬಡ್ತಿ) ನಿಯಮಗಳು 1983 ಹಾಗೂ ಕರ್ನಾಟಕ ನಾಗರೀಕ ಸೇವಾ (ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು 1991ರ ಪ್ರಕಾರ ಮಂಜೂರು ಮಾಡಲಾಗಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಕಾಲಮಿತಿ ವೇತನ ಬಡ್ತಿ ಮಂಜೂರಾತಿಯ ದಿನಾಂಕ | ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿ ಮಂಜೂರಾತಿಯ ದಿನಾಂಕ |
|---|---|---|---|
| 1. | ಸೈಯದ್ ತಹಸೀನ್ ಅಹಮದ್ | – | 09–04–1992 |
| 2. | ವಿ.ಎ.ಮಜ್ಸೀದ್ ಹುಸ್ಸೇನ್ | 06–08–1986 | 05–08–1991 |
| 3. | ಎಚ್.ವಿ.ಶ್ರೀನಿವಾಸ್ ಮೂರ್ತಿ | 30–07–1986 | 09–07–1991 |

| ಕ್ರ. ಸಂ. | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಕಾಲಮಿತಿ ವೇತನ ಬಡ್ತಿ ಮಂಜೂರಾತಿಯ ದಿನಾಂಕ | ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿ ಮಂಜೂರಾತಿಯ ದಿನಾಂಕ |
|---|---|---|---|
| 4. | ಕೆ.ತಿಮ್ಮೇಗೌಡ | – | 31–07–1991 |
| 5. | ಖಾಜ ಫಹೀಮುದ್ದೀನ್ ಅಹಮದ್ | – | 12–04–1992 |
| 6. | ಎಸ್.ಸಿ.ಹನುಮಿನಾಳ್ | – | 09–01–1992 |
| 7. | ಸಯ್ಯದ್ ಆಲಿ ರಜ್ವಿ | – | 19–12–1994 |
| 8. | ಪುಟ್ಟಮಾದಯ್ಯ | 23–02–1993 | – |
| 9. | ಬಿ.ಹೀರಾನಾಯಕ್ | 31–05–1992 | – |
| 10. | ಎಚ್.ಎಂ.ಮುಜೀಬ್ ಅಹ್ಮದ್ | – | 05–09–1993 |
| 11. | ಜಿತೇಂದ್ರ ಸಿಂಗ್ | 29–03–1993 | – |
| 12. | ಆರ್.ಎಸ್.ಎಳುಮಲೈ | 03–09–1988 | 02–09–1993 |
| 13. | ಎಸ್.ಜಿ.ಬಿರಾದಾರ್ | – | 29–03–1992 |
| 14. | ಎಸ್.ಎ.ಮಠದ್ | – | 09–04–1992 |
| 15. | ಜಿ.ಸಿ.ರಾಜಶೇಖರ್ | – | 19–08–1993 |
| 16. | ಕೆ.ಕೃಷ್ಣೇಗೌಡ | – | 24–08–1993 |
| 17. | ಎಲ್.ರಾಧಾಕೃಷ್ಣ | – | 19–08–1993 |
| 18. | ವಿ.ಎಸ್.ನಾಯಕ್ | – | 19–08–1993 |
| 19. | ಅಹ್ಮದ್ ಹಸನ್ | – | 13–09–1993 |
| 20. | ಮಿರ್ಜಾ ಅಕ್ಬರುಲ್ಲಾ | – | 15–08–1993 |
| 21. | ಎಂ.ವಿ.ಗೊಂಗಡ ಶೆಟ್ಟಿ | – | 20–08–1993 |
| 22. | ಅಬ್ದುಲ್ ರಹೀಂ | – | 09–01–1995 |
| 23. | ಕೆ.ಆರ್.ಜಯಪ್ರಕಾಶ್ ರಾವ್ | – | 27–02–1995 |
| 24. | ಕೆ. ಪ್ರಭುದೇವ್ | – | 27–03–1997 |
| 25. | ಮಹಮದ್ ಅಮಾನುಲ್ಲಾ ಷರೀಫ್ | 03–09–1989 | – |
| 26 | ಕೆ.ಎಚ್.ನಿಂಗೇಗೌಡ | 20–07–1986 | 19–07–1991 |
| 27. | ಎಸ್.ಮಹದೇವಯ್ಯ | 31–05–1987 | 30–05–1992 |

ಈ ಮೇಲಿನ ಅಧಿಕಾರಿಗಳು ಈ ಹಿಂದೆ ಕಾಲಮಿತಿ ವೇತನ ಬಡ್ತಿ ಸೌಲಭ್ಯಗಳನ್ನು ಪಡೆದಿದ್ದಲ್ಲಿ ಅದರಿಂದ ಲಭ್ಯವಾದ ಆರ್ಥಿಕ ಸೌಲಭ್ಯವು ಈ ಆದೇಶ ಹೊರಡಿಸಿದ ದಿನಾಂಕದಿಂದ ತಾನಾಗಿಯೇ ರದ್ದಾಗುತ್ತದೆ ಹಾಗೂ ಕೆ.ಎ.ಎಸ್ (ಕಿರಿಯ ಶ್ರೇಣಿ) ವೃಂದಕ್ಕೆ ವಾಸ್ತವಿಕವಾಗಿ ಮುಂಬಡ್ತಿ ಪಡೆದ ದಿನಾಂಕದಿಂದ ಅದೇ ವೃಂದಕ್ಕೆ ಬಡ್ತಿಯು ಮುಂದೂಡಲ್ಪಟ್ಟು ನೀಡಲಾದ ಅರ್ಹ ದಿನಾಂಕದವರೆಗೆ ಕೆಎಎಸ್ (ಕಿ.ಶ್ರೇಣಿ) ವೃಂದದಲ್ಲಿ ಪಡೆದಿರುವ ಹೆಚ್ಚುವರಿ ವೇತನವನ್ನು ಕಟಾಯಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 805 ವೆಚ್ಚ –7/08, ದಿನಾಂಕ:30–07–2008 ಅಭಿಪ್ರಾಯದೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2031

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–2 ರ ಅನುಷ್ಠಾನಕ್ಕಾಗಿ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಅನುಷ್ಠಾನ ಘಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಉಪವಿಭಾಗಾಧಿಕಾರಿ/ ಸಹಾಯಕ ಆಯುಕ್ತರು (ಭೂಸ್ವಾಧೀನ) ಇವರಿಗೆ ಕರ್ನಾಟಕ ಹೆದ್ದಾರಿ ಕಾಯ್ದೆ 1964ರ ಕಲಂ 26, 27 ಮತ್ತು 28ರ ಅಡಿಯಲ್ಲಿ ಭೂಮಾಲೀಕರಿಂದ ಒಪ್ಪಿಗೆ ಕರಾರುಗಳನ್ನು ಮಾಡಿಸಿಕೊಳ್ಳಲು ಪರಿಹಾರವನ್ನು ನಿಗದಿಪಡಿಸಲು ಹಾಗೂ ಭೂಸ್ವಾಧೀನ ಕಾಯ್ದೆ 1894ರ ಕಲಂ 23 ಮತ್ತು 24ರಂತೆ ಪರಿಹಾರ ನಿಗಧಿಪಡಿಸಿ ಐತೀರ್ಪು ರಚಿಸುವ ಅಧಿಕಾರ ನೀಡುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಯೋಜನಾಧಿಕಾರಿಗಳು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆರವರ ಪತ್ರದ ಸಂಖ್ಯೆ: ಯೋಅಘ: ಕರಾಹೆಅಯೋ–2: ಆಡಳಿತ: 2007–08: 2107 ದಿನಾಂಕ: 27.11.2007.

2) ಸರ್ಕಾರದ ಪತ್ರದ ಸಂಖ್ಯೆ: ಪಿಡಬ್ಲ್ಯೂಡಿ:215: ಇಎಪಿ:2007.

**ಪ್ರಸ್ತಾವನೆ:**

1) ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ಕೆಶಿಪ್) ವಿಶ್ವ ಬ್ಯಾಂಕ್ ನೆರವಿನ ಸಾಲ ಯೋಜನೆಯಾಗಿದ್ದು ಇದರಿಂದ ಕರ್ನಾಟಕ ರಾಜ್ಯದ ವಿವಿಧ ಸ್ಥಳಗಳಲ್ಲಿ ರಾಜ್ಯ ಹೆದ್ದಾರಿಗಳನ್ನು ಅಭಿವೃದ್ಧಿ ಪಡಿಸಲಾಗಿದೆ. ಕೆಶಿಪ್–1ನೇ ಹಂತದಲ್ಲಿ ಇದಕ್ಕೆ ಬೇಕಾದ ಭೂಮಿಯನ್ನು ಭೂಸ್ವಾಧೀನ ಕಾಯ್ದೆ 1894ರ ಅಡಿಯಲ್ಲಿ ಕಂದಾಯ ಇಲಾಖೆಯ ಉಪ ವಿಭಾಗಾಧಿಕಾರಿಗಳ ಮುಖಾಂತರ ಭೂಸ್ವಾಧೀನ ಪಡಿಸಿಕೊಳ್ಳಲಾಗಿತ್ತು. ಭೂಸ್ವಾಧೀನ ಕಾಯ್ದೆ 1894ರಲ್ಲಿ ಭೂಸ್ವಾಧೀನ ಪಡಿಸಿಕೊಳ್ಳಬೇಕಾದರೆ ಮೂರು ವರ್ಷದ ಅವಧಿ ತೆಗೆದುಕೊಳ್ಳಲಾಗಿದೆ. ಇದು ಬಹಳ ಹೆಚ್ಚಿನ ಅವಧಿಯಾಗಿದ್ದು ರಸ್ತೆಗಳ ನಿರ್ಮಾಣಕ್ಕಾಗಿ ಟೆಂಡರ್‌ಗಳನ್ನು ಕರೆಯುವುದು, ಜಮೀನನ್ನು ಗುತ್ತಿಗೆದಾರರಿಗೆ ವಹಿಸಿಕೊಡುವುದು ಬಹಳ ವಿಳಂಬವಾಗಿ ಎಲ್ಲರು ಕಷ್ಟಕ್ಕೆ ಸಿಲುಕುವಂತ ಪರಿಸ್ಥಿತಿ ನಿರ್ಮಾಣವಾಗುತ್ತಿತ್ತು, ಕೆಲವೊಮ್ಮೆ ಭೂಮಾಲೀಕರು ಪರಿಹಾರವನ್ನು ತೆಗೆದುಕೊಳ್ಳದೆ, ಜಮೀನನ್ನು ಸ್ವಾಧೀನಕ್ಕೆ ಬಿಟ್ಟುಕೊಡದೆ ಗುತ್ತಿಗೆದಾರರಿಗೆ ಅಡಚಣೆಯಾಗಿ ಅವರಿಗೆ ವಿಳಂಬ ಪರಿಹಾರವನ್ನು ನೀಡುವ ಸಂದರ್ಭಗಳು ಉದ್ಭವವಾಗುವುವು.

2) ಆದ್ದರಿಂದ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–2 ರಲ್ಲಿ ಮೇಲೆ ತಿಳಿಸಿರುವ ವಿಳಂಬ ಹಾಗೂ ತೊಂದರೆಗಳನ್ನು ನಿವಾರಿಸುವ ಸಲುವಾಗಿ ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಅಡಿಯಲ್ಲಿ ಭೂಸ್ವಾಧೀನ ಪಡಿಸಿಕೊಳ್ಳಲು ಆದೇಶಿಸುವಂತೆ ಕೆಶಿಪ್ ಕೋರಿರುತ್ತದೆ. ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಅಡಿಯಲ್ಲಿ ಭೂಸ್ವಾಧೀನ ಪ್ರಕ್ರಿಯೆ ಶೀಘ್ರವಾಗಿ ಪೂರ್ಣಗೊಳಿಸಲು ಅವಕಾಶವಿರುತ್ತದೆ, ಈ ಕಾಯ್ದೆಯ ಕಲಂ 15ರ ಅಡಿಯಲ್ಲಿ ಅಧಿಸೂಚನೆ ಹೊರಡಿಸಿದ ನಂತರ ಐತೀರ್ಪು ರಚಿಸಿ ನೇರವಾಗಿ ಜಮೀನನ್ನು ಸ್ವಾಧೀನ ಪಡೆಯಲು ಅವಕಾಶವಿದ್ದು ಕಲಂ 27ರ ಅಡಿಯಲ್ಲಿ ಒಪ್ಪಂದದ ಮೇಲೆ ಜಮೀನನ್ನು ಭೂಸ್ವಾಧೀನಪಡಿಸಲು ಅವಕಾಶವಿರುತ್ತದೆ. ಮೇಲೆ ತಿಳಿಸಿದ ಕಾರಣಗಳಿಂದ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–5ರಲ್ಲಿ ರಸ್ತೆಗಳ ನಿರ್ಮಾಣಕ್ಕಾಗಿ ಬೇಕಾಗುವ ಜಮೀನನ್ನು ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಅಡಿಯಲ್ಲಿ ಭೂಸ್ವಾಧೀನ ಪಡಿಸಿಕೊಳ್ಳಬಹುದಾಗಿದೆ.

3) ಮೇಲೆ ತಿಳಿಸಿರುವ ಭೂಸ್ವಾಧೀನ ಪ್ರಕ್ರಿಯೆಗಳನ್ನು ಸಕಾಲದಲ್ಲಿ ಪೂರ್ಣಗೊಳಿಸಲು ಹಾಗೂ ಭೂಮಿಯನ್ನು ಗುತ್ತಿಗೆದಾರರ ವಶಕ್ಕೆ ನೀಡಲು ಹಾಗೂ ಭೂಮಾಲೀಕರಿಗೆ ತೊಂದರೆ ಇಲ್ಲದ ರೀತಿಯಲ್ಲಿ ಪರಿಹಾರವನ್ನು ನಿಗದಿಪಡಿಸಲು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–2ರಲ್ಲಿ ಕಾರ್ಯನಿರ್ವಹಿಸುತ್ತಿರುವ ಉಪವಿಭಾಗಾಧಿಕಾರಿ/ಸಹಾಯಕ ಆಯುಕ್ತರು (ಭೂಸ್ವಾಧೀನ) ಇವರಿಗೆ ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಕಲಂ 26,27,28 ರ ಅಡಿಯಲ್ಲಿ ಕೆಲಸ ನಿರ್ವಹಿಸುವ ಅಧಿಕಾರ ನೀಡಲು ಕೋರಲಾಗಿದೆ. ಆದ್ದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ:85:ಇಎಪಿ 2009, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ ವಿಶ್ವಬ್ಯಾಂಕ್ ನೆರವಿನ ಸಾಲ ಯೋಜನೆ ಅಡಿಯಲ್ಲಿ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–2ರಲ್ಲಿ ಭೂಸ್ವಾಧೀನಕ್ಕೆ ಒಳಪಡುವ ಜಮೀನಿನ ಭೂಮಾಲೀಕರಿಂದ ಒಪ್ಪಿಗೆ ಕರಾರುಗಳನ್ನು ಮಾಡಿಸಿಕೊಳ್ಳಲು, ಪರಿಹಾರವನ್ನು ನಿಗದಿಪಡಿಸಲು ಮತ್ತು ಭೂಮಾಲೀಕರು ಒಪ್ಪದ ಪಕ್ಷದಲ್ಲಿ ಭೂಸ್ವಾಧೀನ ಕಾಯ್ದೆ 1894ರ ಕಲಂ 23 ಮತ್ತು 24ರಂತೆ ಪರಿಹಾರ ನಿಗದಿಪಡಿಸಿ ಐತೀರ್ಪನ್ನು ರಚಿಸಲು ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–2ರ ಅನುಷ್ಠಾನ ಘಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಉಪವಿಭಾಗಾಧಿಕಾರಿ/ಸಹಾಯಕ ಆಯುಕ್ತರು (ಭೂಸ್ವಾಧೀನ) ಇವರಿಗೆ ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು LAW, Justice & Human Rights Dept., (Opn-2) ರವರ ಟಿಪ್ಪಣಿ ಸಂಖ್ಯೆ Law:3841:LS:T: 2009 ದಿನಾಂಕ 28–08–2009 ಸಹಮತಿಯಂತೆ ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಅಧಿನಿಯಮ 1964ರಲ್ಲಿರುವ ಅವಕಾಶಗಳನ್ವಯ ಹೊರಡಿಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೇವಿಪ್ರಸಾದ್**

ಪಿ.ಆರ್. 2148

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

## INFRASTRUCTURE DEVELOPMENT SECRETARIAT

**Sub:** Guarantee Commission payable by KSIIDC for availing HUDCO loan raised for meeting the land cost of the Bangalore international Airport Project.

**Read:** 1. G.O.No. IDD 47 DIA 2006 dated 27.3.2007
2. Letter No. DGM (IPD)/227/ 2007-08 dated 24.4.07 of the Executive Director, KSIIDC
3. G.O. No. IDD 47 DIA 06 (P) dated: 25.09.2009.
4. Letter No. DGM (IPD)/448/ 2008-09 dated 20.5.09 of the Managing Director. KSIIDC.

**Preamble:**

In G.O dated 27.3.2007 read at Sl.No. (1) above, the Government while releasing funds (Loan Installment) for the quarter ending 31.3.2007 Government had made an observation that at no point of time Government had approved inclusion of service charges for servicing the debt by KSIIDC on behalf of the State Government.

In letter dated 24.4.2007, KSIIDC sent a revised proposal ecplaining the reasons for claimning the service charges and requested for release of funds towards short payment (service charges) and to restore KSIIDC service charges for servicing the HUDCO loan.

After considering KSIIDC's request Government in G.O. dated 27.9.2007 read at Sl. No. (3) above, accorded sanction for release of Rs. 41.43 lakhs claimed by KSIIDC as service charge for servicing the HUDCO loan obtained for Bangalore International Airport Project on behalf of the Government of Karnataka, with condition that the same shall be adjusted towards Guarantee Commission payable by KSIIDC for availing the loan facility on State Government Guarantee; to the Head of Account 0075-00-108-0-01-Guarantee Fees without any cash outgo in this regard.

In their letter dated 20.5.2009 read at Sl.No. (4) above, the Managing Director, KSIIDC has sent a proposal for release of funds towards the accumulated arrears of service charges to KSIIDC for servicing the HUDCO loan raised for procuring the land for Bangalore international Airport Project(BIAP). Government have examined the above proposal.

Hence the following order.

**Government Order No. IDD 47DIA 2006 Bangalore Dated: 7th September 2009**

After careful examination of the proposal,sanction of the Government is hereby accorded for the following:-

2) The outstanding Guarantee Commission with KSIIDC as on 31.3.2009 is Rs. 24.37 crore out of this,

(a) Expenditure of Rs. 83.37 lakhs of service charges on HUDCO loan for the financial year 2007-08 and 2008-09 is released from the Head of Account 5465-01-190-04-240- Assistance to BIAP- Assistance for repayment of HUDCO loan where a provision of Rs. 25.99 crore is made during 2009-10.This expenditure is to be adjusted by crediting it to the Head of Account "0075-00108-0-01- Guarantee Fees".

(b) By this the total guarantee commission payable by KSIIDC as on 31.3.2009 on loans other than HUDCO loan of Rs. 15.79 crore would be reduced to the extent of RS. 83.37 lakhs and Rs.14.96 crore would still have to be remitted by KSIIDC in cash.

(c) KSIIDC should work out a calendar for making this payment of guarantee commission on its other loans over the next one year and submit to Govt., in F.D and

(d) An amount of Rs.8.58 crore Guarantee Commission for the HUDCO loan obtained for BIA. Project by KSIIDC on behalf of Government of Karnataka is to be paid through book adjustment already factored in the budget for the year 2009-10,underthe Head of Acount 5465-01-190-1-104-240- Assistance to BIAP- Assistance for repayment of HUCO Loan. There is no cash outgo in this regard.

3) This order issues with the concurrence of FD, vide, Endorsement No.FD 1120 Exp-I/09 dated 20.07.2009.

By order and in the name of the Governor of Karnataka
**N. MANJULA GEETHA**
Under Secetary to Government,
Infrastructure Development Department.

P.R. 2151

**ಕಂದಾಯ ಸಚಿವಾಲಯ**

**ವಿಷಯ:** ನೋಂದಣಿ ಮಹಾಪರೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಕಚೇರಿ, ಶಿಂಷಾ ಭವನ ಕಟ್ಟಡದ ಬಾಡಿಗೆಯನ್ನು ನಿರ್ಧರಿಸಿ ಆದೇಶ ನೀಡುವ ಬಗ್ಗೆ.

**ಓದಲಾಗಿದೆ:**
1) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಅ.ಸ.ಪತ್ರ ಸಂಖ್ಯೆ: ಬಿಎಲ್‌ಡಿ 1/94–95, ದಿನಾಂಕ 17.12.2007
2) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ 1/94–95, ದಿನಾಂಕ 13.08.2008
3) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ 1/94–95, ದಿನಾಂಕ: 28.04.2009
4) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ 1/94–95, ದಿನಾಂಕ 02.06.2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1)ರ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರದಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೇಂದ್ರ ಕಚೇರಿಯು ಬೆಂಗಳೂರು ಜಲಮಂಡಳಿ ಕಟ್ಟಡದ 7ನೇ ಮಹಡಿಯಲ್ಲಿ 3600 ಚ.ಅ.ವಿಸ್ತೀರ್ಣದ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಸ್ಥಳದ ಅಭಾವವಿರುವುದರಿಂದ ಸದರಿ ಕಟ್ಟಡವನ್ನು ಬೆಂಗಳೂರು ಜಲಮಂಡಳಿಯವರದೇ ಆದ ಜಯನಗರದಲ್ಲಿರುವ ಶಿಂಷಾ ಭವನದಲ್ಲಿ 1ನೇ ಮತ್ತು 2ನೇ ಮಹಡಿಯಲ್ಲಿ ಲಭ್ಯವಿರುವ ಸುಮಾರು 10,000 ಚ.ಅ.ವಿಸ್ತೀರ್ಣದ ಜಾಗಕ್ಕೆ ವರ್ಗಾಯಿಸಲು ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ. ಮೊದಲ ಹಂತದಲ್ಲಿ ಶಿಂಷಾ ಭವನಕ್ಕೆ ಕಚೇರಿಯನ್ನು ಸ್ಥಳಾಂತರಿಸಲು ಲೋಕೋಪಯೋಗಿ ಇಲಾಖೆ ಮತ್ತು ಸರ್ಕಾರ ಬಾಡಿಗೆ ದರವನ್ನು ಮಂಜೂರು ಮಾಡುವುದನ್ನು ಕಾಯ್ದಿರಿಸಿ ಅನುಮತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(2) ರ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರ ಕೇಂದ್ರ ಕಚೇರಿಯನ್ನು ಪ್ರಸ್ತುತ ಕಾವೇರಿ ಭವನದಿಂದ ಶಿಂಷಾ ಭವನಕ್ಕೆ ಸ್ಥಳಾಂತರಿಸಿದ್ದು, ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಇವರು ಸದರಿ ಕಟ್ಟಡದ 1 ಮತ್ತು 2ನೇ ಮಹಡಿಯ ಬಾಡಿಗೆಯನ್ನು 1 ಚ.ಅ.ಗೆ ರೂ.14.06ರಂತೆ 11,190 ಚ.ಅಡಿಗಳಿಗೆ 1,67,400/–ರಂತೆ ನಿಗದಿಪಡಿಸಿ, ಬಾಡಿಗೆ ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ದಿನಾಂಕ 01.01.2008ರಿಂದ ಶಿಂಷಾ ಭವನದಲ್ಲಿ ಕಚೇರಿ ಕಾರ್ಯನಿರ್ವಹಿಸುತ್ತಿದ್ದು, ಸದರಿ ದಿನಾಂಕದಿಂದ ಜಾರಿಗೆ ಬರುವಂತೆ ಬಾಡಿಗೆಯನ್ನು ನೀಡಲು ಆದೇಶ ಹೊರಡಿಸುವಂತೆ ಹಾಗೂ ಬಾಡಿಗೆಯ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2030–03–001–171ರಲ್ಲಿ ಈಗಾಗಲೇ ಇತರೆ ಕಟ್ಟಡಗಳಿಗೆ ಭರಿಸುವ ರಿತ್ಯಾ ಭರಿಸಬೇಕಾಗಿದ್ದು, ಈ ಬಗ್ಗೆಯೂ ಸಹ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(3) ರ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರದಲ್ಲಿ ಕೇಂದ್ರ ಕಚೇರಿಯು ಕಾರ್ಯನಿರ್ವಹಿಸುತ್ತಿರುವ ಶಿಂಷಾ ಭವನ ಕಟ್ಟಡಕ್ಕೆ ದಿನಾಂಕ 01.01.2008ರಿಂದ ಮಾರ್ಚ್ 2009ರವರೆಗೆ ಒಟ್ಟು 15 ತಿಂಗಳುಗಳ ಬಾಡಿಗೆ ಬಾಕಿ ಇದ್ದು, ಈ ಬಾಕಿ ಮೊತ್ತವು ರೂ.25,11,000/– ಗಳಾಗಿದ್ದು, ಈ ಬಾಡಿಗೆಯನ್ನು ಶೀಘ್ರವೇ ಪಾವತಿಸುವಂತೆ ಕಾರ್ಯಪಾಲಕ ಅಭಿಯಂತರರು ಕೋರಿರುವುದಾಗಿ, ಆದ್ದರಿಂದ ಈ ಕಟ್ಟಡಕ್ಕೆ ಬಾಡಿಗೆ ನಿಗದಿಪಡಿಸಿ ಸರ್ಕಾರಿ ಆದೇಶದೊಂದಿಗೆ ಈ ಬಾಕಿ ಮೊತ್ತವನ್ನು ಕಟ್ಟಡದ ಮಾಲೀಕರಿಗೆ ಪಾವತಿ ಮಾಡಲು ಅನುದಾನವನ್ನು ಬಿಡುಗಡೆಗೊಳಿಸಿ ಕೊಡಬೇಕಾಗಿ ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(4) ರ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರದಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೇಂದ್ರ ಕಚೇರಿಯು ಬೆಂಗಳೂರಿನಲ್ಲಿರುವ ಬಿಡಬ್ಲ್ಯೂಎಸ್‌ಎಸ್‌ಬಿ ರವರ ಒಡೆತನದ ಶಿಂಷಾ ಭವನ ಕಟ್ಟಡದಲ್ಲಿ ದಿನಾಂಕ 01.10.2008ರಿಂದ ಬಾಡಿಗೆ ಆಧಾರಿತವಾಗಿ ಕಾರ್ಯನಿರ್ವಹಿಸುತ್ತಿದ್ದು, ಸದರಿ ಕಟ್ಟಡಕ್ಕೆ ಬಾಡಿಗೆ ಪಾವತಿ ಮಾಡುವ ಸಂಬಂಧ ಗುತ್ತಿಗೆ ಕರಾರು ಪತ್ರದ ಕರಡು ಪ್ರತಿ ಮತ್ತು ಬೆಂಗಳೂರು ಜಲ ಮಂಡಳಿಯವರು ನೀಡಿರುವ ಒಪ್ಪಿಗೆ ಪತ್ರವನ್ನು ಲಗತ್ತಿಸಿ, ಈ ಸಂಬಂಧ ಸರ್ಕಾರದಿಂದ ಇನ್ನೂ ಬಾಡಿಗೆ ನಿಗದಿಯಾಗದೇ ಇರುವುದರಿಂದ ಇದುವರೆಗೂ ಬಾಡಿಗೆ ಕರಾರು ಪತ್ರವನ್ನು ನೋಂದಣಿ ಮಾಡಿಸಿರುವುದಿಲ್ಲವೆಂದು ತಿಳಿಸುತ್ತಾ, ಶೀಘ್ರವಾಗಿ ಬಾಡಿಗೆ ನಿಗದಿಪಡಿಸಿ ಆದೇಶ ಹೊರಡಿಸುವಂತೆ ಕೋರಲಾಗಿದೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 490 ಮನೋಮು 2007, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2009**

ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಕೇಂದ್ರ ಕಚೇರಿ ಕಾರ್ಯನಿರ್ವಹಿಸುತ್ತಿರುವ ಬೆಂಗಳೂರು ಜಯನಗರ 8ನೇ ಬ್ಲಾಕ್‌ನಲ್ಲಿರುವ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಶಿಂಷಾ ಭವನ ಕಟ್ಟಡದ ಮೊದಲನೇ ಮತ್ತು 2ನೇ ಮಹಡಿಯ 11,190 ಚದರ ಅಡಿ ವಿಸ್ತೀರ್ಣವುಳ್ಳ ಪ್ರತಿ ಚದರ ಅಡಿಗೆ ರೂ.14.96ಗಳಂತೆ ಲೋಕೋಪಯೋಗಿ ಇಲಾಖೆ ಇವರು ಶಿಫಾರಸ್ಸು ಮಾಡಿರುವಂತೆ ಮಾಹೆಯಾನ ರೂ.1,67,400/– ಗಳಿಗೆ ನಿಗದಿಪಡಿಸಿರುವ ಬಾಡಿಗೆಗೆ ದಿನಾಂಕ 01.01.2008ರಿಂದ ಸದರಿ ಕಟ್ಟಡದ ಬಾಡಿಗೆಯ ವೆಚ್ಚವನ್ನು ಇಲಾಖೆಯ ಒಟ್ಟಾರೆ ಅನುದಾನದಲ್ಲಿಯೇ ಭರಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಕಂಇ 35115 ಐಎಫ್‌ಎ 2009, ದಿನಾಂಕ 28.07.2009 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ರಾಮಚಂದ್ರ**

ಪಿ.ಆರ್. 2158 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಕುಕ 74 ಪಿಟಿಡಿ 2009, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯನ್ನು ಪುನರ್ ರಚಿಸಿ ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ: ಆಕುಕ 49 ಪಿಟಿಡಿ 2006, ದಿನಾಂಕ:16–03–2006 ರಲ್ಲಿನ ಕ್ರ.ಸಂ.12ರಲ್ಲಿ 'ಶ್ರೀ ಅನ್ನದಾನಿ, ವಿಧಾನಸಭಾ ಸದಸ್ಯರು, ಮಳವಳ್ಳಿ ಕ್ಷೇತ್ರ' ಇವರ ಬದಲಿಗೆ 'ಶ್ರೀ ಬಿ.ಎನ್.ವಿಜಯಕುಮಾರ್, ವಿಧಾನಸಭಾ ಸದಸ್ಯರು, ಜಯನಗರ ವಿಧಾನಸಭಾ ಕ್ಷೇತ್ರ, ಬೆಂಗಳೂರು' ಇವರನ್ನು ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯ ಸದಸ್ಯರನ್ನಾಗಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 2163 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎನ್.ಹೆಚ್.ಸೂಳೇಬಾವಿ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ದಂಡ ಪ್ರಕ್ರಿಯಾ ಸಂಹಿತೆಯಡಿ ಅಭಿಯೋಜನಾ ಮಂಜೂರಾತಿ ನೀಡುವ ಕುರಿತಂತೆ.

**ಓದಲಾಗಿದೆ:** ಮಹಾ ವ್ಯವಸ್ಥಾಪಕರು (ಭೂ ಸ್ವಾಧೀನ) ಕೃಷ್ಣ ಮೇಲ್ದಂಡೆ ಯೋಜನೆ, ನವನಗರ, ಬಾಗಲಕೋಟೆ ಇವರ ಪತ್ರ ಸಂಖ್ಯೆ: ಮವ್ಯ: ಭೂಸ್ವಾ: ಸಿಬ್ಬಂದಿ:ವಹಿ:144:2000–01–2293, ದಿನಾಂಕ:02–08–06

**ಪ್ರಸ್ತಾವನೆ:**

ಶ್ರೀ ಎನ್.ಹೆಚ್.ಸೂಳೇಬಾವಿ, ಕೆಎಎಸ್ (ಕಿರಿಯ ಶ್ರೇಣಿ) ಇವರು ಈ ಹಿಂದೆ ವಿಶೇಷ ಭೂಸ್ವಾಧೀನಾಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಇವರ ಕಚೇರಿಯಲ್ಲಿ ಭೂ ಸಂತ್ರಸ್ಥರಿಗೆ ಮುದ್ರಾಂಕ ಶುಲ್ಕ ಹಾಗೂ ನೋಂದಣಿ ಶುಲ್ಕ ವಿನಾಯ್ತಿಗಾಗಿ ನೀಡುವ ನಮೂನೆ–1 ರ ನಕಲಿ ಪ್ರಮಾಣ ಪತ್ರಗಳನ್ನು ನೀಡಿದ್ದು ಈ ನಕಲಿ ಪ್ರಮಾಣ ಪತ್ರಗಳ ಆಧಾರದ ಮೇಲೆ ಮುದ್ರಾಂಕ ಶುಲ್ಕ ಹಾಗೂ ನೊಂದಣಿ ಶುಲ್ಕ ವಿನಾಯ್ತಿ ಪಡೆಯುತ್ತಿರುವುದಾಗಿ ಬಂದ ಅನಾಮಧೇಯ ದೂರು ಅರ್ಜಿಯಲ್ಲಿನ ಅಂಶಗಳನ್ನು ಪರಿಶೀಲಿಸಿ ವರದಿ ನೀಡುವಂತೆ ಮೇಲಾಧಿಕಾರಿಗಳ ನಿರ್ದೇಶನದನ್ವಯ ಅಂದಿನ ವಿಶೇಷ ಜಿಲ್ಲಾಧಿಕಾರಿಗಳು, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ರವರು ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ಇವರ ಕಛೇರಿಯಿಂದ ವಿತರಿಸಲಾದ ಹಾಗೂ ಇವುಗಳನ್ನು ಉಪ ನೋಂದಣಾಧಿಕಾರಿಗಳ ಕಛೇರಿ ಜಮಖಂಡಿ ಅಥಣಿ ಹಾಗೂ ಮುಧೋಳ ಇವರಿಗೆ ಸಲ್ಲಿಸಲಾದ ನಮೂನೆ–1 ರ ಪ್ರಮಾಣ ಪತ್ರಗಳ ಪ್ರತಿಗಳನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ಇವರ ಕಾರ್ಯಾಲಯದಲ್ಲಿನ ದಾಖಲೆಗಳಾದ ಭೂ ಸ್ವಾಧೀನ ಕಾಯ್ದೆ ಕಲಂ 4(1) ಹಾಗೂ 6(1) ರ ಅಧಿಸೂಚನೆ ಹಾಗೂ ಭೂ ಪರಿಹಾರ ಪಾವತಿ ಮಾಡಿದ ವಹಿಗಳ ಜೊತೆಗೆ ಒಟ್ಟು 26 ಗ್ರಾಮಗಳ ಭೂ ಸಂತ್ರಸ್ಥರಿಗೆ ನೀಡಿದ ನಮೂನೆ–1 ಗಳನ್ನು

ಪರಿಶೀಲಿಸಿದಾಗ 5 ಗ್ರಾಮಗಳಲ್ಲಿ ಒಟ್ಟು 38 ನಕಲಿ ನಮೂನೆ–1 ಪ್ರಮಾಣ ಪತ್ರ ನೀಡಿರುವುದು ಕಂಡುಬಂದಿದ್ದು, ಇದರಿಂದ ಸರ್ಕಾರಕ್ಕೆ ರೂ.741001–00ಗಳ ಆರ್ಥಿಕ ನಷ್ಟ ಉಂಟಾಗಿರುವುದಾಗಿ ವರದಿ ನೀಡಿರುತ್ತಾರೆ. ಈ ವರದಿಯ ಆಧಾರದ ಮೇಲೆ ಹಾಗೂ ಮೇಲಾಧಿಕಾರಿಗಳ ನಿರ್ದೇಶನದಂತೆ ವಿಶೇಷ ಜಿಲ್ಲಾಧಿಕಾರಿಗಳು, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ಇವರು ಸಂಬಂಧಿಸಿದ ಅಧಿಕಾರಿ/ ಸಿಬ್ಬಂದಿಗಳ ವಿರುದ್ಧ ಜಮಖಂಡಿ ಪೊಲೀಸ್ ಠಾಣೆಯಲ್ಲಿ ದಿನಾಂಕ:19–03–01 ರಂದು ಕ್ರಿಮಿನಲ್ ಪಿರ್ಯಾದು ದಾಖಲಿಸಿದ್ದು, ಈ ಪಿರ್ಯಾದು ಕ್ರೈಂ ನಂ 27/2001 ಎಂದು ದಾಖಲಾಗಿರುತ್ತದೆ. ಈ ಕ್ರಿಮಿನಲ್ ಮೊಕದ್ದಮೆ ವಿರುದ್ಧ ಶ್ರೀ ಎನ್.ಹೆಚ್. ಸೂಳೇಬಾವಿರವರು ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 12985/01 (GM-RES) ರಲ್ಲಿ ಪ್ರಕರಣ ದಾಖಲಿಸಿದ್ದು, ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ಕ್ರಿಮಿನಲ್ ಮೊಕದ್ದಮೆ ದಾಖಲಿಸಿದ ಕಾರಣ, ಕ್ರಿಮಿನಲ್ ಮೊಕದ್ದಮೆ ಸಂಖ್ಯೆ 27/2001 ಅನ್ನು ರದ್ದುಪಡಿಸಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 26–08–05 ರಂದು ಆದೇಶ ಹೊರಡಿಸಿರುತ್ತದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಯ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಿಸಲು ಅನುಮತಿ ನೀಡಲು ಶಿಫಾರಸ್ಸು ಮಾಡುವಂತೆ ಮೇಲೆ ಓದಲಾದ ಪತ್ರದಲ್ಲಿ ಕಂದಾಯ ಇಲಾಖೆಯನ್ನು ಕೋರಲಾಗಿದ್ದು, ಕಂದಾಯ ಇಲಾಖೆಯು ಇದಕ್ಕೆ ಸಹಮತಿ ನೀಡಿರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವಂತಾಗಲು, ಶ್ರೀ ಎನ್.ಹೆಚ್. ಸೂಳೇಬಾವಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ದೋಷಾರೋಪಣೆ ಪಟ್ಟಿ ಸಲ್ಲಿಸಲು ಅನುಕೂಲವಾಗುವಂತೆ ಅಭಿಯೋಜನೆಗೆ ಒಳಪಡಿಸಲು ದಂಡ ಪ್ರಕ್ರಿಯಾ ಸಂಹಿತೆ, 1973 ರ ಕಲಂ 197 ರನ್ವಯ ಅನುಮತಿ ನೀಡುವುದು ಅವಶ್ಯಕವೆಂದು ಮನಗಂಡ ಸರ್ಕಾರವು ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 064 ಕೆಇವಿ 07, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಶ್ರೀ ಎನ್.ಹೆಚ್.ಸೂಳೇಬಾವಿ, ಕೆಎಎನ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ವಿಶೇಷ ಭೂಸ್ವಾಧೀನಾಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ, (ಪ್ರಸ್ತುತ ವಿಶೇಷ ಭೂಸ್ವಾಧಿನಾಧಿಕಾರಿ, ಹಿಡಕಲ್ ಡ್ಯಾಂ, ಬೆಳಗಾವಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ) ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ದಂಡ ಪ್ರಕ್ರಿಯಾ ಸಂಹಿತೆ, 1973ರ ಕಲಂ 197ರ ಪ್ರಕಾರ ಸಕ್ಷಮ ಪ್ರಾಧಿಕಾರವು ಈ ಮೂಲಕ ಅಭಿಯೋಜನಾ ಮಂಜೂರಾತಿಯನ್ನು ನೀಡುತ್ತದೆ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 2164

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಶ್ರೀಮತಿ ಕವಿತಾ ಮನ್ನಿಕೇರಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಉಪವಿಭಾಗಾಧಿಕಾರಿ, ಸೇಡಂ ಉಪವಿಭಾಗ, ಸೇಡಂ ಇವರ ವಿರುದ್ಧ ಇಲಾಖಾ ವಿಚಾರಣೆ–ಅಂತಿಮ ಆದೇಶ

**ಓದಲಾಗಿದೆ:** 1) ದಿನಾಂಕ: 12–05–2009ರ ನೋಟೀಸು ಸಂಖ್ಯೆ: ಸಿಆಸುಇ 066 ಕೆಇವಿ 08

2) ಶ್ರೀಮತಿ ಕವಿತಾ ಮನ್ನಿಕೇರಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಸಹಾಯಕ ನಿರ್ದೇಶಕರು (ಆಡಳಿತ ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ಇವರ ರಕ್ಷಣಾತ್ಮಕ ಲಿಖಿತ ಹೇಳಿಕೆ ದಿನಾಂಕ:26.06.09.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀಮತಿ ಕವಿತಾ ಮನ್ನಿಕೇರಿ, ಕೆಎಎಸ್ (ಕಿರಿಯ ಶ್ರೇಣಿ) ಇವರು ಉಪ ವಿಭಾಗಾಧಿಕಾರಿ, ಸೇಡಂ ಉಪವಿಭಾಗ, ಸೇಡಂ ಹಾಗೂ ಮತದಾರರ ನೋಂದಣಾಧಿಕಾರಿಗಳು, ಚಿತ್ತಾಪುರ (ಮೀಸಲು ಕ್ಷೇತ್ರ) ವಿಧಾನಸಭಾ ಕ್ಷೇತ್ರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಪ್ರಜಾ ಪ್ರತಿನಿಧಿ ಕಾಯ್ದೆ 1950 ಮತದಾರರ ನೋಂದಣಿ ನಿಯಮಗಳು, 1960 ಹಾಗೂ ಕಾಲಕಾಲಕ್ಕೆ ಚುನಾವಣಾ ಆಯೋಗವು ಹೊರಡಿಸುವ ವಿವಿಧ ನಿರ್ದೇಶನಗಳನ್ವಯ ಮತದಾರರ ಪಟ್ಟಿಗಳನ್ನು ಸಿದ್ಧಪಡಿಸಿ, ಪರಿಷ್ಕರಿಸುವ ಜವಾಬ್ದಾರಿ ಇವರದಾಗಿದ್ದು, ಸದರಿ ವಿಧಾನ ಸಭಾ ಕ್ಷೇತ್ರಕ್ಕೆ ದಿನಾಂಕ: 22–05–08 ರಂದು ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಮತಗಟ್ಟೆ 98ರಲ್ಲಿ ಮತದಾರರ ಪಟ್ಟಿಯಿಂದ ಹೆಸರು ತೆಗೆಯಲ್ಪಟ್ಟ ಸುಮಾರು 100 ಕ್ಕೂ ಹೆಚ್ಚು ಮತದಾರರು ಮತ ಚಲಾಯಿಸಿರುವುದು ಚುನಾವಣಾ ವೀಕ್ಷಕರ ಗಮನಕ್ಕೆ ಬಂದ ಕಾರಣ, ಮರು ಮತದಾನಕ್ಕೆ ಆದೇಶಿಸಲಾಗಿರುತ್ತದೆ. ಇದರಿಂದಾಗಿ ಸರ್ಕಾರದ ಅಮೂಲ್ಯ ಸಮಯ ಹಾಗೂ ಹಣವನ್ನು ವೆಚ್ಚ ಮಾಡಲು ಆಸ್ಪದವಾಗಿರುತ್ತದೆ. ಈ ಘಟನೆಯ ಬಗ್ಗೆ ಪ್ರಾದೇಶಿಕ ಆಯುಕ್ತರು, ಬೆಳಗಾಂ ರವರು ತನಿಖೆ ನಡೆಸಿ ಸಲ್ಲಿಸಿದ ವರದಿಯಲ್ಲಿ ಮತದಾರರ ಪಟ್ಟಿಯಿಂದ ಹೆಸರುಗಳನ್ನು ತೆಗೆಯುವಲ್ಲಿ ಪ್ರಜಾ ಪ್ರತಿನಿಧಿ ಕಾಯ್ದೆ ಮತ್ತು ಮತದಾರರ ನೋಂದಣಿ ನಿಯಮಗಳಲ್ಲಿ ನಮೂದಿಸಿರುವ ವಿಧಾನಗಳನ್ನು ಅನುಸರಿಸದ ಕಾರಣ, ಮರುಮತದಾನಕ್ಕೆ ಆಸ್ಪದ ಕೊಟ್ಟಂತಾಗಿದೆ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಸಹಾಯಕ ಮತದಾರರ ನೋಂದಣಾಧಿಕಾರಿಯಾದ ಚಿತ್ತಾಪುರ ತಾಲ್ಲೂಕಿನ ತಹಶೀಲ್ದಾರರು, ಸದರಿ ಮತದಾರರ ಪಟ್ಟಿಯ ಕ್ರಮ ಸಂಖ್ಯೆ 1

ರಿಂದ 1494ರವರೆಗಿನ ಮತದಾರರು ಆ ಪ್ರದೇಶದಲ್ಲಿ (ವಾಸ ಸ್ಥಳದಲ್ಲಿ) ಇಲ್ಲ ಕಾರಣ ಇವರುಗಳ ಹೆಸರುಗಳನ್ನು ಪಟ್ಟಿಯಿಂದ ಹೊರತುಪಡಿಸಿ ಮತದಾರರ ಪಟ್ಟಿಯನ್ನು ಮುದ್ರಣ ಮಾಡಲು ಗುತ್ತಿಗೆದಾರರಿಗೆ ಆದೇಶ ನೀಡಿದ್ದು, ಹೆಸರುಗಳನ್ನು ಪಟ್ಟಿಯಿಂದ ತೆಗೆಯುವ ಮೊದಲು ಆಯಾ ಮತದಾರರಿಗೆ ನೋಟಿಸುಗಳನ್ನು ನೀಡಿರುವುದಿಲ್ಲ. ಇದರಿಂದಾಗಿ, ಶ್ರೀಮತಿ ಕವಿತಾ ಮನ್ನಿಕೇರಿರವರು ಮತದಾರರ ನೋಂದಾಣಾಧಿಕಾರಿಯಾಗಿ ಹೆಸರು ತೆಗೆಯುವ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ತೊಡಗದೇ ನಿಯಮಬಾಹಿರವಾಗಿ ತಹಶೀಲ್ದಾರರು/ಸಹಾಯಕ ಮತದಾರರ ನೋಂದಣಾಧಿಕಾರಿಯವರು ಹೆಸರು ತೆಗೆಯುವಲ್ಲಿ ಸಹಕಾರ ನೀಡಿರುತ್ತಾರೆ. ಈ ಮತದಾರರ ಹೆಸರುಗಳನ್ನು ತೆಗೆದು ಹಾಕುವ ಕ್ರಮವು ಸಂಪೂರ್ಣ ತಪ್ಪಿನಿಂದ ಕೂಡಿದ್ದು, ಶ್ರೀಮತಿ ಕವಿತಾ ಮನ್ನಿಕೇರಿ ರವರು ಯಾವುದೇ ಜವಾಬ್ದಾರಿ/ ಮುತುವರ್ಜಿ ವಹಿಸದೇ ಇರುವುದು ಕರ್ತವ್ಯ ವಿಮುಖತೆಯನ್ನು ತೋರುವ ಮೂಲಕ ಎಸಗಿದ ದುರ್ನಡತೆ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಇವರ ಹೇಳಿಕೆ/ ಸಮಜಾಯಿಷಿ ಪಡೆಯಲು, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11 ರನ್ವಯ ದೋಷಾರೋಪಣ ಪಟ್ಟಿಯನ್ನು ನೋಟೀಸಿನೊಂದಿಗೆ ಜಾರಿಗೊಳಿಸಲಾಯಿತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಂತೆ ಶ್ರೀಮತಿ ಕವಿತಾ ಮನ್ನಿಕೇರಿ, ಕೆಎಎಸ್ (ಕಿರಿಯ ಶ್ರೇಣಿ). ಸಹಾಯ ನಿರ್ದೇಶಕರು (ಆಡಳಿತ) ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ಇವರು ಸಲ್ಲಿಸಿದ ರಕ್ಷಣಾತ್ಮಕ ಲಿಖಿತ ಹೇಳಿಕೆಯಂತೆ, ಪಟ್ಟಿಯಿಂದ ಮತದಾರರ ಹೆಸರುಗಳನ್ನು ತೆಗೆಯುವ ನಡವಳಿಗಳನ್ನು ಸಹಾಯಕ ಮತದಾರರ ನೋಂದಣಾಧಿಕಾರಿಯವರು (ತಹಶೀಲ್ದಾರ್, ಚಿತ್ತಾಪುರ ತಾಲೂಕು, ಚಿತ್ತಾಪುರ) ತಮ್ಮ ಗಮನಕ್ಕೆ ತಂದಿರುವುದಿಲ್ಲವೆಂದೂ, ಇದಕ್ಕೆ ತಮ್ಮ ಅನುಮತಿ ಪಡೆದಿರುವುದಿಲ್ಲವೆಂದೂ, ಮತದಾರರ ಹೆಸರುಗಳನ್ನು ಪಟ್ಟಿಯಿಂದ ತೆಗೆಯುವ ಬಗ್ಗೆ ತಾವು ಯಾವುದೇ ಮೌಖಿಕ ಅಥವಾ ಲಿಖಿತ ಸೂಚನೆ ನೀಡಿರುವುದಿಲ್ಲವೆಂದೂ, ಸದರಿ ಪ್ರಕರಣವು ಯಾವುದೇ ಸಂದರ್ಭದಲ್ಲಿ ತಮ್ಮ ಗಮನಕ್ಕೆ ಬಂದಿದ್ದರೂ ಇದನ್ನು ಸರಿಪಡಿಸುವ ಬಗ್ಗೆ ಅಗತ್ಯ ಕ್ರಮಕೈಗೊಳ್ಳುತ್ತಿದೆ ಎಂದೂ ತಿಳಿಸುತ್ತಾ ತಮ್ಮ ಸಮಜಾಯಿಷಿಯನ್ನು ಪರಿಗಣಿಸಿ, ತಮ್ಮ ಮೇಲಿನ ಉದ್ದೇಶಿತ ಶಿಸ್ತು ಕ್ರಮವನ್ನು ಕೈಬಿಡುವಂತೆ ಮಾಡಿರುವ ಮನವಿಯನ್ನು/ ರಕ್ಷಣಾತ್ಮಕ ಹೇಳಿಕೆಯನ್ನು ಸರ್ಕಾರವು, ಕೂಲಂಕುಷವಾಗಿ ಪರಿಶೀಲಿಸಿ ನಂತರ ಅಂಗೀಕರಿಸಿ, ಈ ಕೆಳಕಂಡತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 066 ಕೆಇವಿ 08, ಬೆಂಗಳೂರು, ದಿನಾಂಕ: 8ನೇ ಸೆಪ್ಟಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಶ್ರೀಮತಿ ಕವಿತಾ ಮನ್ನಿಕೇರಿ, ಕೆಎಎಸ್ (ಕಿರಿಯ ಶ್ರೇಣಿ) ಸಹಾಯಕ ನಿರ್ದೇಶಕರು (ಆಡಳಿತ) ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11ರನ್ವಯ ದೋಷಾರೋಪಣ ಪಟ್ಟಿಯೊಂದಿಗೆ ದಿನಾಂಕ: 12–05–09 ರಂದು ಜಾರಿಗೊಳಿಸಿದ ನೋಟಿಸಿಗೆ ಇವರು ದಿನಾಂಕ: 26–06–209 ರಂದು ಸಲ್ಲಿಸಿದ ಲಿಖಿತ ರಕ್ಷಣಾತ್ಮಕ ಹೇಳಿಕೆಯನ್ನು ಅಂಗೀಕರಿಸಿ, ಇವರು ಇನ್ನು ಮುಂದೆ ಸರ್ಕಾರಿ ಕೆಲಸದ ಕಾರ್ಯನಿರ್ವಹಣೆಯಲ್ಲಿ ಹೆಚ್ಚಿನ ಜಾಗರೂಕತೆಯಿಂದ ಕರ್ತವ್ಯ ನಿರ್ವಹಿಸುವಂತೆ ಎಚ್ಚರಿಕೆ ನೀಡುತ್ತಾ, ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಣಯಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಇವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

ಪಿ.ಆರ್. 2165

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಲೋಕೋಪಯೋಗಿ ಇಲಾಖೆಯ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಪದನಾಮವನ್ನು "ಸಹಾಯಕ ಇಂಜಿನಿಯರ್ (ವಿಭಾಗ– II)" ಎಂದು ಪುನರ್ ಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ಇಂಜಿನಿಯರ್ ಸೇವಾ ಸಂಘ, ಬೆಂಗಳೂರು ಇವರ ಮನವಿ ದಿನಾಂಕ 19–01–09.

**ಪ್ರಸ್ತಾವನೆ:**

ಮೇಲೆ ಓದಲಾದ ಮನವಿಯಲ್ಲಿ, ಕರ್ನಾಟಕ ಇಂಜಿನಿಯರಿಂಗ್ ಸೇವಾ ಸಂಘವು, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಹುದ್ದೆಯು ಸಹಾಯಕ ಇಂಜಿನಿಯರ್ ವೃಂದದ ತತ್ಸಮಾನ ಹುದ್ದೆಯಾಗಿದ್ದು, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಹುದ್ದೆಯನ್ನು ಸಹಾಯಕ ಇಂಜಿನಿಯರ್ (ವಿಭಾಗ–II) ಎಂದು ಪದನಾಮ ಬದಲಾಯಿಸುವಂತೆ ಕೋರಿರುತ್ತಾರೆ.

ಕರ್ನಾಟಕ ಇಂಜಿನಿಯರಿಂಗ್ ಸೇವಾ ಸಂಘದ ಕೋರಿಕೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಮತ್ತು ಸಹಾಯಕ ಇಂಜಿನಿಯರ್ ಇವೆರಡೂ ವೃಂದಗಳ ವೇತನ ಶ್ರೇಣಿ, ಕರ್ತವ್ಯ ಹಾಗೂ ಜವಾಬ್ದಾರಿಗಳು ಒಂದೇ ಇರುವುದರಿಂದ ಹಾಗೂ ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ

ತಿದ್ದುಪಡಿ ಪ್ರಸ್ತಾವನೆಯು ಪರಿಶೀಲನೆಯಲ್ಲಿದ್ದು ಈ ಪ್ರಕ್ರಿಯೆಗೆ ಇನ್ನಷ್ಟು ಕಾಲಾವಕಾಶ ಅಗತ್ಯವಿರುವುದರಿಂದ ಕಾರ್ಯಕಾರಿ ಆದೇಶವನ್ನು ಹೊರಡಿಸುವ ಅಗತ್ಯವಿರುವುದನ್ನು ಮನಗಂಡು, ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿಯನ್ನು ಕಾಯ್ದಿರಿಸಿ, ಕಾರ್ಯಕಾರಿ ಆದೇಶವನ್ನು ಹೊರಡಿಸುವುದು ಅವಶ್ಯಕವಾಗಿದ್ದು, ಅದರಂತೆ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 176 ಸೇಎಸು 2009, ಬೆಂಗಳೂರು, ದಿನಾಂಕ: 11ನೇ ಸೆಪ್ಟಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಲೋಕೋಪಯೋಗಿ ಇಲಾಖೆಯ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿಯನ್ನು ಕಾಯ್ದಿರಿಸಿ, ಸಹಾಯಕ ಇಂಜಿನಿಯರ್ (ವಿಭಾಗ–II)' ಎಂದು ಪುನರ್ ಪದನಾಮೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್**.ಸಿ. **ರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ)

ಪಿ.ಆರ್. 2178

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಗದಗ್ ಕಂದಾಯ ತಾಲ್ಲೂಕಿಗೆ ನೋಟರಿಯನ್ನು ನೇಮಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಪತ್ರ ಸಂಖ್ಯೆ ಲಾ 133 ಎಲ್‌ಸಿಎಲ್ 08 ದಿನಾಂಕ 06–12–08 ಮತ್ತು 23–05–09
2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ್ ಇವರ ಪತ್ರ ಸಂಖ್ಯೆ 408/09 ದಿನಾಂಕ 28–01–09
3. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂ. GSR 114(E) ದಿನಾಂಕ:24.02.09
4. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ್ ಇವರ ಪತ್ರ ಸಂಖ್ಯೆ 1947/09 ದಿನಾಂಕ 19–06–09
5. ಅಧಿಸೂಚನೆ ಲಾ 61 ಎಲ್‌ಸಿಎಲ್ 09 ದಿನಾಂಕ 18–07–09
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 133 ಎಲ್‌ಸಿಎಲ್ 2008 ದಿನಾಂಕ 23–07–09
7. ಸಂದರ್ಶನ ಮಂಡಳಿಯ ನೋಟರಿಗಳ ಆಯ್ಕೆ ನಡವಳಿ ಸಂಖ್ಯೆ LAW/ALS/OPN/67-09 ದಿನಾಂಕ:06–08–09

**ಪ್ರಸ್ತಾವನೆ:**

ಗದಗ್ ಕಂದಾಯ ತಾಲ್ಲೂಕಿನಲ್ಲಿ ನೋಟರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಎ.ಹೆಚ್.ಪಾಟೀಲ್ ಇವರಿಂದ ತೆರವಾದ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ, ಜಿಲ್ಲಾ ಸತ್ರ ನ್ಯಾಯಾಧೀಶರು, ಗದಗ್ ಇವರನ್ನು ಉಲ್ಲೇಖಿತ (1) ರ ದಿನಾಂಕ 06–12–08ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕ 28–01–2009ರ ಪತ್ರದಲ್ಲಿ, 15 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಸದರಿ ಪ್ರಸ್ತಾವನೆಯು ನೋಟರಿ ನಿಯಮ 6 ಮತ್ತು 7 ರನ್ವಯ ಪರಿಶೀಲನಾ ವರದಿಯನ್ನೊಳಗೊಂಡಿರಲಿಲ್ಲವಾದ್ದರಿಂದ ಉಲ್ಲೇಖಿತ (3) ರ ತಿದ್ದುಪಡಿ ನಿಯಮಗಳನ್ವಯ ಪುನರ್ ಪರಿಶೀಲಿಸಿ ನಿಯಾಮಾನುಸಾರ ವಿವರವಾದ ವರದಿಯೊಂದಿಗೆ ಪರಿಷ್ಕೃತ ಪ್ರಸ್ತಾವನೆ ಸಲ್ಲಿಸುವಂತೆ ಎಲ್ಲಾ ಮನವಿಗಳನ್ನು ಉಲ್ಲೇಖಿತ (1) ದಿನಾಂಕ 23–05–09ರ ಪತ್ರದಲ್ಲಿ ಹಿಂದಿರುಗಿಸಲಾಗಿತ್ತು. ಉಲ್ಲೇಖಿತ (3) ರ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಉಲ್ಲೇಖಿತ (5) ದಿನಾಂಕ 18–07–2009ರ ಅಧಿಸೂಚನೆಯಲ್ಲಿ 3 ಸದಸ್ಯರನ್ನೊಳಗೊಂಡ ಸಂದರ್ಶನಾ ಮಂಡಳಿಯನ್ನು ರಚಿಸಲಾಗಿದೆ, ಅದರಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಗದಗ್ ರವರು ಉಲ್ಲೇಖಿತ (4) ರ ದಿನಾಂಕ 19–06–09ರಂದು ಸಲ್ಲಿಸಿರುವ ಪರಿಷ್ಕೃತ ಪ್ರಸ್ತಾವನೆಯನ್ನು ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳಿಸಿ, ಉಲ್ಲೇಖಿತ (6) ದಿನಾಂಕ 23–07–2009ರಲ್ಲಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ಉಲ್ಲೇಖಿತ (7) ರ ನಡವಳಿ ದಿನಾಂಕ 06–08–2009 ರಲ್ಲಿ ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಂದ ಸ್ವೀಕೃತಗೊಂಡ ಎಲ್ಲಾ 15 ಮೆಮೋರಿಯಲ್ಸ್ ಹಾಗೂ ಸಂದರ್ಶನಾ ಮಂಡಳಿಯ ಶಿಫಾರಸ್ಸನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ.ಲಾ 133 ಎಲ್‌ಸಿಎಲ್ 2008 ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2009**

ನೋಟರಿ ಅಧಿನಿಯಮ (1952) ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು (1956) ಹಾಗೂ ತಿದ್ದುಪಡಿ ನಿಯಮಗಳು 2009ರ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ಶ್ರೀಮತಿ ದನಶ್ರೀ

ಎಸ್.ಕಡಬಗಿ, ವಕೀಲರು ರಾಜೀವಗಾಂಧಿನಗರ ಪ್ಲಾಟ್ ನಂ.171, ಗದಗ್ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಗದಗ್ ಕಂದಾಯ ತಾಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070 ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯಪರಿಪಾಲನೆ 501–0–ಇತರೆ ಸ್ವೀಕೃತಿಗಳು–06 ಇತರೆ ಬಾಬುಗಳಿಗೆ (0070–01–501–0–06) ನಿಯಮಗಳನ್ನು ನಿಗಧಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರುಗಳ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಶಕುಂತಲ**

ಪಿ.ಆರ್. 2179

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಫಕೀರಪ್ಪ ಬಾಳಪ್ಪ ಚವ್ಹಾಣ, ಡಿವೈ.ಎಸ್.ಪಿ. ಹಿಂದಿನ ಎ.ಸಿ.ಪಿ. ಟ್ರಾಫಿಕ್, ಹುಬ್ಬಳ್ಳಿ–ಧಾರವಾಡರವರು ಅಕ್ರಮ ಆಸ್ತಿ ಹೊಂದಿರುವವರೆಂಬ ಕರ್ನಾಟಕ ಲೋಕಾಯುಕ್ತರವರ ವರದಿ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಚೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ (ಜಿ) ಎಲ್–31/ಸಿಆರ್–5/2009/ಧಾರವಾಡ, ದಿನಾಂಕ 27–07–2009

**ಪ್ರಸ್ತಾವನೆ:**

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಚೇರಿ, ಕರ್ನಾಟಕ ಲೋಕಾಯುಕ್ತ ಬೆಂಗಳೂರುರವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ ಶ್ರೀ ಫಕೀರಪ್ಪ ಬಾಳಪ್ಪ ಚವ್ಹಾಣ, ಎ.ಸಿ.ಪಿ. ಟ್ರಾಫಿಕ್, ಹುಬ್ಬಳ್ಳಿ–ಧಾರವಾಡರವರು ನಿಗದಿತ ಆದಾಯಕ್ಕಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವುದರ ಬಗ್ಗೆ ಖಚಿತ ಮಾಹಿತಿಯ ಹಿನ್ನೆಲೆಯಲ್ಲಿ ಅವರ ವಿರುದ್ಧ ಧಾರವಾಡ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊ.ಸಂ.5/2009ರ ಕಲಂ 13(1)ಇ r/w 13(2)ರ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ರೀತ್ಯಾ ಪ್ರಕರಣವನ್ನು ದಿನಾಂಕ 07–07–2009 ರಂದು ದಾಖಲಿಸಿಕೊಂಡು ಪ್ರಧಾನ ಜಿಲ್ಲಾ ಮತ್ತು ಸತ್ರ ವಿಶೇಷ ನ್ಯಾಯಾಲಯ, ಧಾರವಾಡರವರಿಂದ ಅಗತ್ಯವಾದ ಶೋಧನಾ ವಾರೆಂಟ್‌ಗಳನ್ನು ಪಡೆದುಕೊಂಡು ದಿನಾಂಕ 08–07–2009 ರಂದು ಆರೋಪಿತರ 'ಸಾಯಿಜ್ಯೋತಿ' ಎಂಬ ವಾಸದ ಮನೆ, ಪ್ಲಾಟ್ ನಂ.29ಎ/l, ಸಿಟಿಎಸ್ ನಂ.44/209ಬಿ/2, ಧೀನಬಂದು ಕಾಲೋನಿ, ಹಳೆ ಬಸ್ ನಿಲ್ದಾಣದ ಹತ್ತಿರ, ಹುಬ್ಬಳ್ಳಿ ಹಾಗೂ ಆಪಾದಿತರು ಕರ್ತವ್ಯ ನಿರ್ವಹಿಸುತ್ತಿರುವ ಎ.ಸಿ.ಪಿ. ಕಚೇರಿ, ಟ್ರಾಫಿಕ್ ಉಪವಿಭಾಗ, ಹುಬ್ಬಳ್ಳಿ–ಧಾರವಾಡ ಮತ್ತು ಆದಿತ್ಯ ಹೆಚ್.ಪಿ.ಪೆಟ್ರೋಲ್ ಪಂಪ್ ಮತ್ತು ಒಂದು ಆರ್.ಸಿ.ಸಿ. ಕಟ್ಟಡ, ಆರ್.ಎಸ್.ನಂ.64/2ಬಿ/lಎ/2ಬಿ. ಮೈತ್ರಿ ಹೋಟೆಲ್ ಹತ್ತಿರ ಪಿ.ಬಿ.ರಸ್ತೆ, ಲಕಮನಳ್ಳಿ, ಧಾರವಾಡ ಈ ಸ್ಥಳಗಳ ಮೇಲೆ ಪಂಚಸಾಕ್ಷಿಗಳ ಸಕ್ಷಮ ಶೋಧಿಸಿದಾಗ ಅಪಾರ ಮೊತ್ತದ ಸ್ಥಿರ–ಚರಾಸ್ಥಿ ದೊರೆತಿರುತ್ತವೆ. ಪ್ರಾಥಮಿಕ ತನಿಖೆಯಿಂದ ಆರೋಪಿತರು ಅವರ ಬಲ್ಲ ಮೂಲಗಳಿಗಿಂತ ಹೊಂದಿರುವ ಅಕ್ರಮ ಆಸ್ತಿಗಳ ಮೌಲ್ಯ ರೂ. 1,22,69,674/–ಆಗಿರುತ್ತದೆ. ಸದರಿ ಹೆಚ್ಚುವರಿ ಅಕ್ರಮ ಮೂಲಗಳಿಂದ ಗಳಿಸಿರುವ ಚರ–ಸ್ಥಿರ ಆಸ್ತಿಗಳ ಮೌಲ್ಯವು ಆರೋಪಿತ ಸರ್ಕಾರ ನೌಕರ ಶೋಧನಾ ಅವಧಿಯಲ್ಲಿ ನಿಗಧಿತ ಮೂಲಗಳಿಂದ ಗಳಿಸಿರುವ ವರಮಾನಕ್ಕಿಂತ ಹೆಚ್ಚಿನ ಮೊತ್ತವಾಗಿರುತ್ತದೆ. ಅಲ್ಲದೆ, ಆರೋಪಿತರು, ವಿವಿಧ ಬಾಬ್ತುಗಳಿಗಾಗಿ ಮಾಡಿರುವ ಖರ್ಚು–ವೆಚ್ಚಗಳು ಇನ್ನೂ ಕೆಲವು ಮೂಲಗಳಿಂದ ಬರಬೇಕಾಗಿದೆ. ಇದರಿಂದ ಭವಿಷ್ಯದಲ್ಲಿ ಪ್ರಕರಣದ ತನಿಖೆ ಮುಂದುವರೆದಂತೆ ಹೆಚ್ಚಿನ ಚರ–ಸ್ಥಿರಾಸ್ತಿ ಮತ್ತು ಖರ್ಚು ವೆಚ್ಚಗಳ ಒಟ್ಟಾರೆ ಮೌಲ್ಯವು ಇನ್ನೂ ಹೆಚ್ಚಾಗುವ ಸಂಭವವಿರುತ್ತದೆ. ಈ ಪ್ರಕರಣದ ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗು ದಾಖಲೆ/ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವಂತೆ ಹಾಗೂ ಅವರ ಲೀನ್ ಅನ್ನು ಬೇರೆಡೆಗೆ ಸ್ಥಳಾಂತರಿಸುವಂತೆ ಎ.ಡಿ.ಜಿ.ಪಿ. ಕರ್ನಾಟಕ ಲೋಕಾಯುಕ್ತರವರು ವರದಿ ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆ ಹಾಗೂ ವರದಿಗಳನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 403 ಪೊಸಿಪ 2009, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2009**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಫಕೀರಪ್ಪ ಬಾಳಪ್ಪ ಚವಾಣ, ಡಿವೈಎಸ್‌ಪಿ ಹಿಂದಿನ ಎ.ಸಿ.ಪಿ. ಟ್ರಾಫಿಕ್, ಹುಬ್ಬಳ್ಳಿ–ಧಾರವಾಡರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ. ಇವರ ಲೀನ್ ಅನ್ನು ಡಿವೈ.ಎಸ್.ಪಿ ರಾಜ್ಯ ಗುಪ್ತವಾರ್ತೆ ಹುದ್ದೆಗೆ ಸ್ಥಳಾಂತರಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಫಕೀರಪ್ಪ ಬಾಳಪ್ಪ ಚವ್ಹಾಣ, ಎ.ಸಿ.ಪಿ ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ನೀಡತಕ್ಕದ್ದು.

ಅಮಾನತ್ತಿನ ಅವಧಿಯಲ್ಲಿ ಶ್ರೀ ಫಕೀರಪ್ಪ ಬಾಳಪ್ಪ ಚವ್ಹಾಣ, ಎ.ಸಿ.ಪಿ ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2180 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**REVENUE SECRETARIAT**

**Sub:** National Population Register (NPR)- Identity Cards for the eligible citizens in coastal villages- Appointment of Registrars of Citizen Registration –reg.

**Read:** 1. The Gazette of India Extraordinary No.S.O.1772 (E) dated 15th July 2009 of the Registrar General of Citizen Registration, Ministry of Home Affairs, New Delhi.

2. Letter No. CEN/7/KAR/2009 dated 4th September, 2009 of the Director of Census Operations Karnataka, Bangalore.

**Preamble:**

The Government of India has decided to create a National Population Register (NPR) for all usual residents in the coastal areas and issue identity (smart) cards to them as one of the measure to strengthen the security in the coastal areas. The Government of India under the provisions of Rule 3(4) of the Citizenship (Registration of Citizens and Issue of National Identity Cards) Rules, 2003, has issued a notification Read at 1 above.

The Directorate of census Operations, Karnataka in there letter read at 2 above, as request to issue on order designating the hierarchy of the officers for the project and for delegating the powers.

Hence the order.

**Government Order No: RD 20 ETC 2009, Bangalore, Dated: 9th September 2009**

In the circumstances explained above State Government hereby notified the hierarchy of the functionaries for the NPR-ID project as defined under Rule 2 of the Citizenship (Registration of Citizens and Issue of National Identity Cards) Rules, 2003.

1. Registrar General of Citizen Registration - National Registration Authority
2. Director of Citizen Registration - Director of Census Operations Karnataka, Bangalore.
3. District Registrars of Citizen Registration - Deputy Commissioner of the concerned districts.
4. Sub-district Registar of Citizen Registration - Tahsildar.
5. Local Registrar of Citizen Registration - Village Accountant (V A)

For creation of data base for usual residents in the coastal villages, a frame of households will be prepared through Houselisting Operation followed by data entry of individual particulars electronically. The entire operation will be executed by the Sub-District Registrar of Citizen Registration under the supervision of District Registrar of Citizen Registration and will be monitored by the Officers and Officials of the Directorate of Census Operations, Karnataka, Bangalore and the office of the Registrar General and Census Commissioner, India, New Delhi. In this regard, necessary guidelines, training, field materials, etc., will be provided to the field functionaries by the Directorate of Census Operations,

Karnataka, Bangalore. Technical support for implementation of the project will be provided by Bharat Electonics Ltd., a premier Central public sector undertaking in the country.

The Tahsildars of the coastal taluks of Ankola, Bhatkal, Kumta, Honavar, Karwar, Kundapura, Udupi ang Mangalore shall appoint Enumerators from the teaching staff working in the schools and other Government officials in the coastal villages of their respective taluks to take up the field work by following the instructions/ guidelines of the Director of Census Operations, Karnataka, Bangalore. Since this project is of national importance, proper quality shall be maintained at all levels and further, the functionaries associated with this project shall be in continuous touch with the Director of Census Operation, Karnataka, Bangalore. They shall extend the fullest co-operation to the Director of Census Operations, Karnataka, Bangalore for the smooth and proper execution of the NPR Coastal ID project.

Suitable honorarium will be paid by the Government of India to all the field functionaries associated with this Project.

By Order and in the Name of the Governor of Karnataka

P.R. 2183

**Dr.H.V. PARSWANATH**

Secretary to Government, Revenue Department (DM)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 'ಕರ್ನಾಟಕ ರಾಜ್ಯ ಗ್ರಾಮೀಣ ಉದ್ಯೋಗ ಖಾತರಿ ನಿಧಿ' ಸಂಘದ ಗವರ್ನಿಂಗ್ ಕೌನ್ಸಿಲ್‌ಗೆ ಸದಸ್ಯರನ್ನಾಗಿ ಅಧಿಕಾರಿಗಳು/ ಪಂಚಾಯತ್ ರಾಜ್ ಸಂಸ್ಥೆಗಳ ಅಧ್ಯಕ್ಷರುಗಳನ್ನು ನಾಮನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:**
1. ಕೇಂದ್ರ ಸರ್ಕಾರದ ಪತ್ರ ಸಂ.ಅಸಪ,ನಂ.12011/9/2007–ಎನ್‌ಆರ್‌ಇಜಿಎ ದಿನಾಂಕ 19–03–2008, 09–07–2008, 25–11–2008, 24–12–2008
2. ಕರ್ನಾಟಕ ರಾಜ್ಯ ಉದ್ಯೋಗ ಖಾತರಿ ನಿಧಿ ನಿಯಮ 2008 ಬೆಂಗಳೂರು ದಿನಾಂಕ 31–07–2008
3. ಕರ್ನಾಟಕ ರಾಜ್ಯ ಉದ್ಯೋಗ ಖಾತರಿ ನಿಧಿ (ತಿದ್ದುಪಡಿ) ನಿಯಮ 2009 ಬೆಂಗಳೂರು ದಿನಾಂಕ:11–03–2009
4. ರಾಜ್ಯ ಉದ್ಯೋಗ ಖಾತರಿ ಪರಿಷತ್ ಸಭೆ ದಿನಾಂಕ 07–01–2009
5. ಕರ್ನಾಟಕ ಸರ್ಕಾರದ ಆದೇಶ ಸಂ.ನಂ.ಗ್ರಾಅಪ:37:ಉಖಾಯೋ 2008 ದಿನಾಂಕ 16–03–2009

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಅಧಿನಿಯಮ 2005ರ ಕಲಂ 21(1)ರ ಅನ್ವಯ 'ರಾಜ್ಯ ನಿಧಿ' ಯನ್ನು ಸ್ಥಾಪಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ 1ರಲ್ಲಿ ಸೂಚಿಸಲಾಗಿರುತ್ತದೆ. ಅದರಂತೆ ಕರ್ನಾಟಕ ರಾಜ್ಯ ಉದ್ಯೋಗ ಖಾರತಿ ನಿಧಿ ನಿಯಮವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ 2 ಮತ್ತು 3ರಂತೆ ರಚಿಸಲಾಗಿರುತ್ತದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕೇಂದ್ರ ಸರ್ಕಾರದ ಅನುದಾನವನ್ನು ನೇರವಾಗಿ ರಾಜ್ಯಕ್ಕೆ ಪಡೆದು ಪಂಚಾಯಿತಿಗಳಿಗೆ ಬಿಡುಗಡೆ ಮಾಡಿ ಸಮರ್ಪಕವಾಗಿ ಉಸ್ತುವಾರಿ ಮಾಡುವುದರಿಂದ ಯೋಜನೆಯನ್ನು ಹೆಚ್ಚು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬಹುದೆಂದು, ಮೇಲೆ ಓದಲಾದ ಕ್ರಮ ಸಂ.4ರ ಸಭೆಯಲ್ಲಿ ಕೈಗೊಂಡ ತೀರ್ಮಾನದಂತೆ ಈ ಉದ್ದೇಶದಿಂದ ಸಹಕಾರ ಸಂಘಗಳ ಅಧಿನಿಯಮದ ಪ್ರಕಾರ ಸಂಘವನ್ನು ರಚಿಸಿ ನೊಂದಣಿ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ 5ರಲ್ಲಿ ಏಜನ್ಸಿಯನ್ನು ಸಂಘವನ್ನಾಗಿ ಸಹಕಾರ ಸಂಘಗಳ ನೊಂದಣಿ ನಿಯಮದಡಿ, ಸರ್ಕಾರದ ಆದೇಶ ಸಂಖ್ಯೆ ನಂ.ಗ್ರಾಅಪ:37: ಉಖಾಯೋ 2008 ದಿನಾಂಕ 16–03–2009ರಂತೆ ನೊಂದಣಿ ಮಾಡಿಸಲಾಗಿರುತ್ತದೆ. ಆದೇಶದಲ್ಲಿ ಸಂಘದ ಬೈಲಾ, ಸಂಘಗಳ ಒಡಂಬಡಿಕೆ (Memorandum of Association) ಗಳನ್ನು ಮಾಡಿಕೊಳ್ಳಲಾಗಿದ್ದು, ಅದರಂತೆ ಸಂಘಗಳ ಒಡಂಬಡಿಕೆ ಪ್ಯಾರಾ 7ರಂತೆ 13 ಜನ ಅಧಿಕಾರಿಗಳು (5 ಜನ ನಾಮನಿರ್ದೇಶಿತ) ಮತ್ತು 3 ಜನ ಅಧಿಕಾರೇತರ ಸದಸ್ಯರನ್ನೊಳಗೊಂಡ 16 ಜನರ ಸಂಘದ ಗವರ್ನಿಂಗ್ ಕೌನ್ಸಿಲ್‌ನ್ನು ರಚಿಸಲಾಗಿರುತ್ತದೆ. ಈ ರೀತಿ ರಚಿಸಲಾದ ಗವರ್ನಿಂಗ್ ಕೌನ್ಸಿಲ್‌ಗೆ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆರವರು ಅಧ್ಯಕ್ಷರಾಗಿದ್ದು, ನಿರ್ದೇಶಕರು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯವರು, ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಸಂಸ್ಥಾಪಕ ಸದಸ್ಯರ ಸಭೆಯಲ್ಲಿ ಕೈಗೊಂಡ ತೀರ್ಮಾನಗಳಲ್ಲಿ ಕ್ರಮ ಸಂಖ್ಯೆ 4ರಂತೆ ಗವರ್ನಿಂಗ್ ಕೌನ್ಸಿಲ್‌ಗೆ ಅಧಿಕಾರಿಗಳು/ಪಂಚಾಯತ್ ರಾಜ್ ಸಂಸ್ಥೆಗಳ ಅಧ್ಯಕ್ಷರುಗಳನ್ನು ನಾಮನಿರ್ದೇಶನ ಮಾಡುವ ಅಧಿಕಾರವನ್ನು ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ದಿ ಮತ್ತು ಪಂಚಾಯತ್ ರಾಜ್ ಇಲಾಖೆರವರಿಗೆ ನೀಡಲಾಗಿರುತ್ತದೆ. ನಾಮನಿರ್ದೇಶನಗೊಳ್ಳಬೇಕಾದ ಅಧಿಕಾರಿಗಳು/ಪಂಚಾಯತ್ ರಾಜ್ ಸಂಸ್ಥೆಗಳ ಅಧ್ಯಕ್ಷರುಗಳನ್ನು ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಅವರು ಸೂಚಿಸಿರುತ್ತಾರೆ. ಇವರುಗಳನ್ನು ನಾಮನಿರ್ದೇಶನಗೊಳಿಸಿ ಆದೇಶಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 182 ಉಖಾಯೊ 2009 ಬೆಂಗಳೂರು. ದಿನಾಂಕ: 31ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕರ್ನಾಟಕ ರಾಜ್ಯ ಗ್ರಾಮೀಣ ಉದ್ಯೋಗ ಖಾತರಿ ನಿಧಿ ಸಂಘದ ಉಸ್ತುವಾರಿ ಮತ್ತು ಮೇಲ್ವಿಚಾರಣೆಗಾಗಿ ಗವರ್ನಿಂಗ್ ಕೌನ್ಸಿಲ್‌ಗೆ ಅನುಬಂಧದಲ್ಲಿ ನಮೂದಿಸಿದಂತೆ ಪಂಚಾಯತ್ ರಾಜ್ ಸಂಸ್ಥೆಗಳ ಅಧಿಕಾರಿಗಳು/ಅಧ್ಯಕ್ಷರುಗಳನ್ನು ನಾಮನಿರ್ದೇಶನಗೊಳಿಸಿ ಆದೇಶಿಸಿದೆ.

**ನಾಮನಿರ್ದೇಶನ, ಪದಾವಧಿಯ ವಿಧಾನ ಮತ್ತು ಷರತ್ತುಗಳು:**

1. ಗವರ್ನಿಂಗ್ ಕೌನ್ಸಿಲ್‌ಗೆ ನಾಮನಿರ್ದೇಶಿತರಾದ, ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯಿತಿ ಅಧ್ಯಕ್ಷರು ಹಾಗೂ ಅಧಿಕಾರಿಗಳು ನಾಮನಿರ್ದೇಶನಗೊಂಡಂದಿನಿಂದ ಎರಡು ವರ್ಷದ ಪದಾವಧಿಯನ್ನು ಹೊಂದಿರುತ್ತಾರೆ.
2. ಪದನಾಮಾಂಕಿತ ನಾಮನಿರ್ದೇಶನ ಮಾಡಿರುವಲ್ಲಿ ಉತ್ತರವರ್ತಿಯು ಪದಾವಧಿಯ ಉಳಿದ ಅವಧಿಗೆ ಸದಸ್ಯರಾಗಿರುತ್ತಾರೆ.
3. ಗವರ್ನಿಂಗ್ ಕೌನ್ಸಿಲ್‌ನ ಸದಸ್ಯರು ವರ್ಷಕ್ಕೆ ಒಮ್ಮೆ ಸಭೆ ಸೇರಿ ಸಭೆಯನ್ನು ನಡೆಸತಕ್ಕದ್ದು.
4. ನಾಮನಿರ್ದೇಶಿತ ಸದಸ್ಯರುಗಳ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನಿಯಮಾನುಸಾರ ಆಯಾ ಪಂಚಾಯತ್ ರಾಜ್ ಸಂಸ್ಥೆಗಳಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ.ಪಿ.ಸಿ.ಜಾಫರ್**

ನಿರ್ದೇಶಕರು,

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ

ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಅನುಬಂಧ**

**ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಗವರ್ನಿಂಗ್ ಕೌನ್ಸಿಲ್‌ನ ಅಜೀವ ಸದಸ್ಯರು ಮತ್ತು ನಾಮನಿರ್ದೇಶನಗೊಂಡ ಅಧಿಕಾರಿಗಳು/ಅಧಿಕಾರೇತರ ಸದಸ್ಯರು**

| ಕ್ರ. ಸಂ. | ಹುದ್ದೆ/ಪದನಾಮ | ಗವರ್ನಿಂಗ್ ಕೌನ್ಸಿಲ್‌ನಲ್ಲಿ ಹೊಂದಿರುವ ಸ್ಥಾನಮಾನ |
|---|---|---|
| 1 | ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ, | ಅಧ್ಯಕ್ಷರು, (ಖಾಯಂ ಸದಸ್ಯರು) |
| 2 | ಕಾರ್ಯದರ್ಶಿ (ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು (ಖಾಯಂ ಸದಸ್ಯರು) |
| 3 | ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು (ಖಾಯಂ ಸದಸ್ಯರು) |
| 4 | ನಿರ್ದೇಶಕರು, ರಾ.ಗ್ರಾ.ಉ.ಖಾ.ಯೋ.ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯ ಕಾರ್ಯದರ್ಶಿ (ಖಾಯಂ ಸದಸ್ಯರು) |
| 5 | ನಿರ್ದೇಶಕರು, ಪಂಚಾಯತ್ ರಾಜ್, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು (ಖಾಯಂ ಸದಸ್ಯರು) |
| 6 | ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು (ಖಾಯಂ ಸದಸ್ಯರು) |
| 7 | ಮುಖ್ಯಸ್ಥರು (ಹ&ಲೆ), ರಾ.ಗ್ರಾ.ಉ.ಖಾ.ಯೋ. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು (ಖಾಯಂ ಸದಸ್ಯರು) |
| 8 | ನಿಯಂತ್ರಕರು (ಲೆಕ್ಕ ಪತ್ರ ನಿರ್ವಹಣೆ) ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು (ಖಾಯಂ ಸದಸ್ಯರು) |
| 9 | ಜಿಲ್ಲಾ ಪಂಚಾಯತ್ ಅಧ್ಯಕ್ಷರು, ಮಂಗಳೂರು ಜಿಲ್ಲಾ ಪಂಚಾಯತ್, ಮಂಗಳೂರು. | ಸದಸ್ಯರು (ನಾಮನಿರ್ದೇಶನಗೊಂಡವರು) |

| ಕ್ರ. ಸಂ. | ಹುದ್ದೆ/ಪದನಾಮ | ಗವರ್ನಿಂಗ್ ಕೌನ್ಸಿಲ್‌ನಲ್ಲಿ ಹೊಂದಿರುವ ಸ್ಥಾನಮಾನ |
|---|---|---|
| 10 | ತಾಲ್ಲೂಕು ಪಂಚಾಯತ್ ಅಧ್ಯಕ್ಷರು, ಶಿಕಾರಿಪುರ ತಾಲ್ಲೂಕು ಪಂಚಾಯತ್, ಶಿವಮೊಗ್ಗ ಜಿಲ್ಲೆ, | ಸದಸ್ಯರು (ನಾಮನಿರ್ದೇಶನಗೊಂಡವರು) |
| 11 | ಗ್ರಾಮ ಪಂಚಾಯಿತಿ ಅಧ್ಯಕ್ಷರು, ಹೆಬ್ಬಣಿ ಗ್ರಾಮ ಪಂಚಾಯಿತಿ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ | ಸದಸ್ಯರು (ನಾಮನಿರ್ದೇಶನಗೊಂಡವರು) |
| 12 | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ಧಾರವಾಡ | ಸದಸ್ಯರು (ನಾಮನಿರ್ದೇಶನಗೊಂಡವರು) |
| 13 | ಮುಖ್ಯ ಕಾರ್ಯನಿರ್ವಹಾಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು | ಸದಸ್ಯರು (ನಾಮನಿರ್ದೇಶನಗೊಂಡವರು) |
| 14 | ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಹಾಸನ. | ಸದಸ್ಯರು (ನಾಮನಿರ್ದೇಶನಗೊಂಡವರು) |
| 15 | ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್ ಗುಲ್ಬರ್ಗಾ, ಗುಲ್ಬರ್ಗಾ ಜಿಲ್ಲೆ | ಸದಸ್ಯರು (ನಾಮನಿರ್ದೇಶನಗೊಂಡವರು) |
| 16 | ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್ ಮೈಸೂರು, ಮೈಸೂರು ಜಿಲ್ಲೆ. | ಸದಸ್ಯರು (ನಾಮನಿರ್ದೇಶನಗೊಂಡವರು) |

**ಡಾ.ಪಿ.ಸಿ. ಜಾಫರ್**
ನಿರ್ದೇಶಕರು,
ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ
ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 2184

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** 'ಬೆಂಗಳೂರು ಐ.ಟಿ.ಬಿಜ್–2009' ರ ಕಾರ್ಯಕ್ರಮದ ಅಂಗವಾಗಿ ಏರ್ಪಡಿಸಲಾಗಿರುವ ಮಾಹಿತಿ ತಂತ್ರಜ್ಞಾನದಲ್ಲಿ ಗ್ರಾಮೀಣ ವಿದ್ಯಾರ್ಥಿಗಳಿಗಾಗಿ 'ರಸಪ್ರಶ್ನೆ' ಕಾರ್ಯಕ್ರಮವನ್ನು ನಡೆಸಲು ಅನುದಾನ ಬಿಡುಗಡೆ ಬಗ್ಗೆ–ಆದೇಶ.

**ಪ್ರಸ್ತಾವನೆ:**

ಮಾತಂ ಜೈತಂ ಹಾಗೂ ವಿತಂ ಇಲಾಖೆಯು ಟಾಟಾ ಕನ್ಸಲ್ಟನ್ಸಿ ಸರ್ವಿಸಸ್ (ಟಿಸಿಎಸ್) ರವರ ಸಹಯೋಗದಲ್ಲಿ ಏರ್ಪಡಿಸುತ್ತಿದ್ದ ರಾಜ್ಯಾದ್ಯಂತ ಗ್ರಾಮೀಣ ವಿದ್ಯಾರ್ಥಿಗಳಿಗೆ ರಸಪ್ರಶ್ನೆ ಕಾರ್ಯಕ್ರಮವು ಹತ್ತನೇ ವರ್ಷಕ್ಕೆ ಕಾಲಿಟ್ಟಿದ್ದು, ಪ್ರತಿ ವರ್ಷದಂತೆ ಬೆಂಗಳೂರು ಐಟಿ ಬಿಜ್ 2009 ಮೇಳದ ಅಂಗವಾಗಿ ಈ ವರ್ಷವೂ ಏರ್ಪಡಿಸಲಾಗುತ್ತಿದೆ.

2009ನೇ ಸಾಲಿಗೆ ಅನುದಾನವನ್ನು ದಿನಾಂಕ: 3–10–2009ರಂದು ನಡೆಯುವ ಜಿಲ್ಲಾಮಟ್ಟದ ರಸಪ್ರಶ್ನೆ ಕಾರ್ಯಕ್ರಮ ಮತ್ತು ದಿನಾಂಕ 20–10–2009ರಿಂದ 4–11–2009ರವರೆಗೆ ನಡೆಯುವ ಪ್ರಾದೇಶಿಕ ಸ್ಪರ್ಧೆಯ ರಸಪ್ರಶ್ನೆ ಕಾರ್ಯಕ್ರಮಗಳನ್ನು ನಡೆಸಲು, ಸಭಾಂಗಣದ ವೆಚ್ಚ, ವಿದ್ಯಾರ್ಥಿಗಳನ್ನು ಕರೆ ತರಲು ವಾಹನಗಳನ್ನು ಏರ್ಪಡಿಸಲು ಹಾಗೂ ರಸ ಪ್ರಶ್ನೆ ಕಾರ್ಯಕ್ರಮ ನಡೆಯುವ ದಿನ ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಮಾಡಲು ಹಾಗೂ ಬೆಂಗಳೂರಿನಲ್ಲಿ ದಿನಾಂಕ 12–11–2009 ರಂದು ಬೆಂಗಳೂರು ಐಟಿ.ಬಿಜ್ 2009ರ ಮೇಳದಲ್ಲಿ ನಡೆಯುವ ರಾಜ್ಯ ಮಟ್ಟದ ಅಂತಿಮ ಸುತ್ತಿನಲ್ಲಿ ಭಾಗಹಿಸಲು ಅರ್ಹ ತಂಡದ ವಿದ್ಯಾರ್ಥಿಗಳಿಗೆ ಮತ್ತು ಅವರೊಡನೆ ಬರುವ ಪೋಷಕರು/ಶಿಕ್ಷಕರು (ಎರಡು ಸದಸ್ಯರಿಗೆ ಮಾತ್ರ) ಪ್ರಯಾಣ ಭತ್ಯೆ ಮತ್ತು ತುಟ್ಟಿ ಭತ್ಯೆಗಳನ್ನು ಭರಿಸಲು ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಉಪ ನಿರ್ದೇಶಕರುಗಳಿಗೆ ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ರೂ.15.85 ಲಕ್ಷಗಳು ಬಿಡುಗಡೆ ಮಾಡಲು ಆದೇಶಿಸಿದೆ.

ಈ ಬಾರಿ ರಸಪ್ರಶ್ನೆ ಕಾರ್ಯಕ್ರಮದ 10ನೇ ವಾರ್ಷಿಕೋತ್ಸವದ ಆಚರಣೆಗಾಗಿ ರಾಜ್ಯಮಟ್ಟದ ರಸಪ್ರಶ್ನೆಯಲ್ಲಿ ಎರಡು ಸುತ್ತಿನ ಸ್ಪರ್ಧೆಗಳನ್ನು ಹಮ್ಮಿಕೊಳ್ಳಲಾಗಿದ್ದು, ಮೊದಲನೆಯ ಸುತ್ತಿನಲ್ಲಿ ಆರು ಪ್ರಾದೇಶಿಕ ಮಟ್ಟದ ಜಯಶಾಲಿ ತಂಡಗಳು ರಾಜ್ಯ ಮಟ್ಟದ ರಸಪ್ರಶ್ನೆ ಸ್ಪಧೆಯಲ್ಲಿ ಭಾಗವಹಿಸುತ್ತಾರೆ. ಈ ಸುತ್ತಿನಲ್ಲಿ ಆಯ್ಕೆಯಾದ ಜಯಶಾಲಿಗಳಿಗೆ ಮೊದಲನೆಯ, ಎರಡನೆಯ ಮತ್ತು ಮೂರನೆಯ ಬಹುಮಾನಗಳನ್ನು ನೀಡಲು ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಗೆ ರೂ.85,000/–ಗಳನ್ನು ಬಿಡುಗಡೆ ಮಾಡಲು ಆದೇಶಿಸಿದೆ.

ರಾಜ್ಯಮಟ್ಟದ ಜಯಶಾಲಿ ತಂಡವು ಕೊಲ್ಕತ್ತ, ದೆಹಲಿ, ಭುವನೇಶ್ವರ್, ಕೊಚ್ಚಿ ಮತ್ತು ಬೆಂಗಳೂರು ನಗರಗಳಲ್ಲಿ ನಡೆದ TCS.IT Wiz ರಾಷ್ಟ್ರಮಟ್ಟದ ರಸಪ್ರಶ್ನೆಯಲ್ಲಿ ಆಯ್ಕೆಯಾದ 5 ಜಯಶಾಲಿ ತಂಡಗಳೊಡನೆ ಎರಡನೇಯ ಸುತ್ತಿನ ರಸ ಪ್ರಶ್ನೆ

ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಹೀಗೆ ಒಟ್ಟು ರೂ.16,70,000/–ಗಳ (ರೂ.15,85,000/–+85,000/–) ಅನುದಾನವನ್ನು ಬಿಡುಗಡೆಗೊಳಿಸಲು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 26 ಅಚವಿ 2009, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು 'ಬೆಂಗಳೂರು ಐ.ಟಿ.ಬಿಜ್–2009' ರ ಮೇಳದ ಅಂಗವಾಗಿ ಮಾಹಿತಿ ತಂತ್ರಜ್ಞಾನದಲ್ಲಿ ಗ್ರಾಮೀಣ ವಿದ್ಯಾರ್ಥಿಗಳಿಗಾಗಿ 'ರಸಪ್ರಶ್ನೆ' ಕಾರ್ಯಕ್ರಮವನ್ನು ನಡೆಸಲು ರಾಜ್ಯದ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರುಗಳಿಗೆ (ಅನುಬಂಧದಲ್ಲಿ ತೋರಿಸಿರುವಂತೆ) ಒಟ್ಟು ರೂ. 15,85,000/– (ರೂ.ಹದಿನೈದು ಲಕ್ಷ ಎಂಬತ್ತೈದು ಸಾವಿರಗಳು ಮಾತ್ರ) ಬಿಡುಗಡೆ ಮಾಡಲು ಹಾಗೂ ರಾಜ್ಯಮಟ್ಟದ ಜಯಶಾಲಿಗಳಿಗೆ ಮೊದಲನೆಯ, ಎರಡನೆಯ ಮತ್ತು ಮೂರನೆಯ ಬಹುಮಾನಗಳನ್ನು ನೀಡಲು ಸದರಿ ಅನುಬಂಧದಲ್ಲಿ ತೋರಿಸಿರುವಂತೆ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಗೆ ರೂ. 85,000/– (ರೂ.ಎಂಬತ್ತೈದು ಸಾವಿರಗಳು ಮಾತ್ರ) ಬಿಡುಗಡೆ ಮಾಡಲು ಒಟ್ಟು ರೂ. 16,70,000/–ಗಳ (ರೂ. ಹದಿನಾರು ಲಕ್ಷದ ಎಪ್ಪತ್ತು ಸಾವಿರಗಳು ಮಾತ್ರ) ಅನುದಾನವನ್ನು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚು (ಯೋಜನೆ)' ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರಗಳನ್ನು ರಾಜ್ಯದ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರುಗಳಿಂದ ಹಾಗೂ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಂದ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ ಐಟಡಿ 26 ಎಂಡಿಎ 2009, ದಿನಾಂಕ: 10–09–2009**

| ಕ್ರ. ಸಂ. | ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರುಗಳು | ಪ್ರಾದೇಶಿಕ ಮಟ್ಟಕ್ಕಾಗಿ ಆಯ್ಕೆಯಾದ ವಿದ್ಯಾರ್ಥಿಗಳ ಸಂಖ್ಯೆ (ತಂಡಗಳು) | ರಸಪ್ರಶ್ನೆ ಪೂರ್ಣ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಿರುವ ಅನುದಾನ |
|---|---|---|---|
| 1 | ಬೆಂಗಳೂರು ನಗರ | 25 ತಂಡಗಳು | 25000.00 |
| 2 | ಬಾಗಲಕೋಟೆ | 50 ತಂಡಗಳು | 50000.00 |
| 3 | ಬೆಂಗಳೂರು ಗ್ರಾಮಾಂತರ | 50 ತಂಡಗಳು | 50000.00 |
| 4. | ಬೆಂಗಳೂರು ದಕ್ಷಿಣ | 25 ತಂಡಗಳು | 25000.00 |
| 5 | ರಾಮನಗರ | 50 ತಂಡಗಳು | 50000.00 |
| 6 | ಚಿಕ್ಕೋಡಿ (ಬೆಳಗಾವಿ ಉತ್ತರ) | 25 ತಂಡಗಳು | 25000.00 |
| 7 | ಬೆಳಗಾವಿ ದಕ್ಷಿಣ | 25 ತಂಡಗಳು | 25000.00 |
| 8 | ಬಳ್ಳಾರಿ | 50 ತಂಡಗಳು | 50000.00 |
| 9 | ಬೀದರ್ | 50 ತಂಡಗಳು | 50000.00 |
| 10 | ಬಿಜಾಪುರ | 50 ತಂಡಗಳು | 50000.00 |

| ಕ್ರ. ಸಂ. | ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರುಗಳು | ಪ್ರಾದೇಶಿಕ ಮಟ್ಟಕ್ಕಾಗಿ ಆಯ್ಕೆಯಾದ ವಿದ್ಯಾರ್ಥಿಗಳ ಸಂಖ್ಯೆ (ತಂಡಗಳು) | ರಸಪ್ರಶ್ನೆ ಪೂರ್ಣ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಿರುವ ಅನುದಾನ |
|---|---|---|---|
| 11 | ಚಾಮರಾಜನಗರ | 50 ತಂಡಗಳು | 50000.00 |
| 12 | ಚಿಕ್ಕಮಗಳೂರು | 50 ತಂಡಗಳು | 50000.00 |
| 13 | ಚಿಕ್ಕಬಳ್ಳಾಪುರ | 50 ತಂಡಗಳು | 50000.00 |
| 14 | ಚಿತ್ರದುರ್ಗ | 50 ತಂಡಗಳು | 50000.00 |
| 15 | ಕೂರ್ಗ್ | 50 ತಂಡಗಳು | 50000.00 |
| 16 | ದಕ್ಷಿಣ ಕನ್ನಡ | 50 ತಂಡಗಳು | 50000.00 |
| 17 | ಗದಗ | 50 ತಂಡಗಳು | 50000.00 |
| 18 | ಯಾದಗಿರಿ | 25 ತಂಡಗಳು | 25000.00 |
| 19 | ಹಾಸನ | 50 ತಂಡಗಳು | 50000.00 |
| 20 | ಹಾವೇರಿ | 50 ತಂಡಗಳು | 50000.00 |
| 21 | ಕೋಲಾರ | 50 ತಂಡಗಳು | 50000.00 |
| 22 | ಕೊಪ್ಪಳ | 50 ತಂಡಗಳು | 50000.00 |
| 23 | ಮಂಡ್ಯ | 50 ತಂಡಗಳು | 50000.00 |
| 24 | ರಾಯಚೂರು | 50 ತಂಡಗಳು | 50000.00 |
| 25 | ಶಿವಮೊಗ್ಗ | 50 ತಂಡಗಳು | 50000.00 |
| 26 | ಮಧುಗಿರಿ | 25 ತಂಡಗಳು | 25000.00 |
| 27 | ಉತ್ತರ ಕನ್ನಡ | 50 ತಂಡಗಳು | 50000.00 |
| | **ಒಟ್ಟು** | | **1200000.00** |

| ಕ್ರ ಸ. | ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರುಗಳು | ಪ್ರಾದೇಶಿಕ ಮಟ್ಟದಲ್ಲಿ ಭಾಗವಹಿಸುತ್ತಿರುವ ತಂಡಗಳು | ಪ್ರಾದೇಶಿಕ ಹಂತದ ರಸಪ್ರಶ್ನೆ ಕಾರ್ಯಕ್ರಮ ನಡೆಸಲು 6 ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗಿರುವ ಹೆಚ್ಚುವರಿ ಅನುದಾನ |
|---|---|---|---|
| 1 | ದಾವಣಗೆರೆ | 250 ತಂಡಗಳು | 65000.00 |
| 2 | ಧಾರವಾಡ | 250 ತಂಡಗಳು | 65000.00 |
| 3 | ಗುಲ್ಬರ್ಗ | 200 ತಂಡಗಳು | 60000.00 |
| 4 | ಮೈಸೂರು | 300 ತಂಡಗಳು | 70000.00 |
| 5 | ತುಮಕೂರು | 250 ತಂಡಗಳು | 65000.00 |
| 6 | ಉಡುಪಿ | 200 ತಂಡಗಳು | 60000.00 |
| | **ಒಟ್ಟು** | | **385000.00** |

**ಉಪನಿರ್ದೇಶಕರುಗಳಿಗೆ ಬಿಡುಗಡೆ ಮಾಡಲಾಗಿರುವ ಒಟ್ಟು ಅನುದಾನದ ಮೊತ್ತ 15,85,000.00**

**ಸರ್ಕಾರದ ವೆಚ್ಚದಲ್ಲಿ ಕಿಯೋನಿಕ್ಸ್ ಸಂಸ್ಥೆಯಿಂದ ರಾಜ್ಯಮಟ್ಟದ ಜಯಶಾಲಿಗಳಿಗೆ ಬಹುಮಾನ ವಿತರಣೆ**

| ಜಯಶಾಲಿಗಳು | ಬಹುಮಾನ | ಮೊತ್ತ |
|---|---|---|
| 1ನೇ ಬಹುಮಾನ | ಲ್ಯಾಪ್‌ಟಾಪ್ | 45000 |
| 2ನೇ ಬಹುಮಾನ | ನೆಟ್‌ಬುಕ್ | 25000 |
| 3ನೇ ಬಹುಮಾನ | ಮೊಬೈಲ್ | 15000 |
| **ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿರುವ ಒಟ್ಟು ಅನುದಾನ** | | **85000.00** |
| **ಗ್ರಾಮೀಣ ರಸಪ್ರಶ್ನೆ 2009 ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾಗಿರುವ ಒಟ್ಟು ಅನುದಾನ** | | **1670000.00** |

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2185

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಸರ್ಕಾರಿ ಮಾದರಿ ಬಿತ್ತನೆಕೋಠಿ, ಹಾಸನ ಇಲ್ಲಿನ ಇಲಾಖಾ ವಾಹನ ಸಂಖ್ಯೆ: ಸಿಎಬಿ 6773ರ ದುರಸ್ತಿ ಬಾಬ್ತು ರೂ. 33,250/–ಗಳ ಮಂಜೂರಾತಿ ಬಗ್ಗೆ;

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ (2) ವಾಹನ/13/2009–10, ದಿನಾಂಕ; 20–7–2009

**ಪ್ರಸ್ತಾವನೆ:**

ಸರ್ಕಾರಿ ಮಾದರಿ ಬಿತ್ತನೆಕೋಠಿ, ಹಾಸನ, ಇಲ್ಲಿನ ಇಲಾಖಾ ವಾಹನ ಸಂಖ್ಯೆ: ಸಿಎಬಿ 6773 ರ ದುರಸ್ಥಿ ಬಾಬ್ತು ರೂ. 33,250/–ಗಳ ಮಂಜೂರಾತಿಗೆ ಕುರಿತಂತೆ ರೇಷ್ಮೆ ಉಪನಿರ್ದೇಶಕರು, ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ, ಹಾಸನ ಇವರು ಪ್ರಸ್ತಾವನೆ ಸಲ್ಲಿಸಿರುವುದಾಗಿ, ವಾಹನ ದುರಸ್ಥಿಗಾಗಿ ದಿನಾಂಕ: 22–9–2008ರಂದು ಹಾಗೂ ದಿನಾಂಕ: 10–10–2008ರಂದು ದುರಸ್ತಿ ಪೂರ್ವ ದೃಡೀಕರಣವನ್ನು ಸಾರಿಗೆ ಇಲಾಖೆಯಿಂದ ಪಡೆದಿದ್ದು, ದಿನಾಂಕ: 6–3–2009ರಂದು ಪ್ರಕಟಣೆ ಹೊರಡಿಸಿ, ಸ್ಪರ್ಧಾತ್ಮಕ ದರಪಟ್ಟಿಗಳನ್ನು ಪಡೆದಿರುವುದಾಗಿ ಅವುಗಳಲ್ಲಿ ಮೆ: ವೆಂಕಟೇಶ್ವರ ಡೀಸಲ್, ಹಾಸನ್ ಇವರು ನಮೂದಿಸಿರುವ ದರಪಟ್ಟಿ ಕಡಿಮೆ ಇದ್ದು, ಈ ದರವನ್ನು ಅಂಗೀಕರಿಸಲಾಗಿದೆ ಎಂದು ತಿಳಿಸಿ, ದುರಸ್ತಿ ವಿವರಗಳನ್ನು ವಿವರಿಸಿ, ದುರಸ್ತಿಯು ದೊಡ್ಡ ಪ್ರಮಾಣದ ದುರಸ್ತಿಗೆ ಒಳಪಡಲಿದ್ದು, ದೊಡ್ಡ ಪ್ರಮಾಣದ ದುರಸ್ತಿಯಾದ ಗೇರ್ ಬಾಕ್ಸ್ ದುರಸ್ತಿಗೆ ರೂ.96,000 ಕಿ.ಮೀ. ಕ್ರಮಿಸಬೇಕಾಗಿದ್ದು, ಈ ವಾಹನವು 40,060 ಕಿ.ಮೀ. ಮಾತ್ರ ಕ್ರಮಿಸಿರುತ್ತದೆ. ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ದುರಸ್ತಿ ಬಾಬ್ತು ರೂ. 33,250/–ಗಳಿಗೆ ಮಂಜೂರಾತಿ ನೀಡುವಂತೆ ರೇಷ್ಮೆ ಆಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿರುತ್ತಾರೆ.

ರೇಷ್ಮೆ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ರೇಷ್ಮೆ ಆಯುಕ್ತರು ಕೋರಿರುವಂತೆ ದುರಸ್ತಿ ವೆಚ್ಚಕ್ಕೆ ಮಂಜೂರಾತಿ ನೀಡಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 25 ರೇಯೋವಿ 2009, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಹಾಸನ ಇಲ್ಲಿನ ವಾಹನ ಸಂಖ್ಯೆ: ಸಿಎಬಿ 6773 ದುರಸ್ತಿಗೆ ಸಾದಿಲ್ವಾರು ವೆಚ್ಚದ ಕೈಪಿಡಿ 1958ರ 55ನೇ ನಿಯಮ 40(ಎ) ಉಪನಿಯಮದ 3(ಬಿ)(ಸಿ) ಮತ್ತು (ಡಿ) ರಲ್ಲಿ ನಿಗದಿಗೊಳಿಸಿರುವ ಮಿತಿಗಳನ್ನು ಸಡಿಲಗೊಳಿಸಿ, ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಮತ್ತು ಈ ವಾಹನದ ದುರಸ್ತಿಯನ್ನು ಸರ್ಕಾರದಿಂದ ಅಂಗೀಕೃತವಾದ ಕಾರ್ಯಾಗಾರದಿಂದ ದುರಸ್ತಿಗೊಳಿಸಬೇಕೆಂಬ ಷರತ್ತಿಗೆ ಒಳಪಟ್ಟು ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಹಾಸನ, ಇಲ್ಲಿನ ಇಲಾಖಾ ವಾಹನ ಸಂಖ್ಯೆ: ಸಿಎಬಿ 6773ರ ದುರಸ್ತಿ ಬಾಬ್ತು ರೂ. 33,250/– (ಮೂವತ್ಮೂರು ಸಾವಿರದ ಇನ್ನೂರ ಐವತ್ತು ರೂಪಾಯಿಗಳು ಮಾತ್ರ) ಗಳಿಗೆ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2851–00–107–1–01 (ಯೋಜನೇತರ)–195– ಸಾರಿಗೆ ವೆಚ್ಚಗಳು ಇದರಡಿಯಲ್ಲಿ ಭರಿಸುವುದು.

ಇಲಾಖಾ ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2187

**ಭಾರತಿ ಆರ್.ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಜಲಸಂಪನ್ಮೂಲ ಇಲಾಖೆಯ, ಅಧೀನ ಕಾರ್ಯದರ್ಶಿ (ವಿಬ್ಯಾಯೋ) ಹುದ್ದೆಯನ್ನು ವಿಶೇಷಾಧಿಕಾರಿ (ವಿಬ್ಯಾಯೋ) ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 186 ಸೇಎಸು 2008, ದಿನಾಂಕ 30–06–2009

2. ಸರ್ಕಾರದ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ– ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಜಸಂಇ 49 ಆಶಾ 2009, ದಿನಾಂಕ: 01–07–2009 ಹಾಗೂ 09–07–2009

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಅಧೀನ ಕಾರ್ಯದರ್ಶಿ (ವಿಬಾಯೋ) ಹುದ್ದೆಯಲ್ಲಿ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎಸ್.ಶ್ರೀಧರ್ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಲಸಂಪನ್ಮೂಲ ಇಲಾಖೆ ಇವರನ್ನು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 30–06–2009ರಲ್ಲಿ ಕಾರ್ಯಪಾಲಕ ಇಂಜಿನಿಯರ್ ಹುದ್ದೆಯಲ್ಲಿ ಕ.ನಾ.ಸೇ ನಿಯಮ 32ರ ಅಡಿ ಸ್ವತಂತ್ರ ಪ್ರಭಾರದಲ್ಲಿರಿಸಿ ಮುಂದಿನ ಸ್ಥಳ ನಿಯುಕ್ತಿಗಾಗಿ ಇವರ ಸೇವೆಯನ್ನು ಜಲಸಂಪನ್ಮೂಲ ಇಲಾಖೆಯ ವಶಕ್ಕೆ ನೀಡಲಾಗಿದೆ.

ಅದರಂತೆ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ಇವರು ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಶ್ರೀ ಎಸ್. ಶ್ರೀಧರ್ ಅವರ ಸೇವೆಯು ಜಲಸಂಪನ್ಮೂಲ ಇಲಾಖೆಯಲ್ಲಿ ಅವಶ್ಯವಿರುವುದರಿಂದ, ಪ್ರಸ್ತುತ ಇವರು ಸಚಿವಾಲಯದಲ್ಲಿ ಹೊಂದಿರುವ ಅಧೀನ ಕಾರ್ಯದರ್ಶಿ (ವಿಬಾಯೋ) ಹುದ್ದೆಯನ್ನು ಇವರ ಸಚಿವಾಲಯದಲ್ಲಿ ಕಾರ್ಯನಿರ್ವಹಿಸುವವರೆಗೆ ವಿಶೇಷಾಧಿಕಾರಿ (ವಿಬಾಯೋ) ಹುದ್ದೆ ಎಂದು ಉನ್ನತೀಕರಿಸಿ ಇವರನ್ನು ನಿಯೋಜನೆ ಮೇರೆಗೆ ಮುಂದುವರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 365 ಸಅಸೇ 2009 ಬೆಂಗಳೂರು, ದಿನಾಂಕ: 15ನೇ ಸೆಪ್ಟಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಕರ್ನಾಟಕ ಸರ್ಕಾರದ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಅಧೀನ ಕಾರ್ಯದರ್ಶಿ (ವಿಬ್ಯಾಯೋ) ಹುದ್ದೆಯನ್ನು ತಾತ್ಕಾಲಿಕವಾಗಿ ನಿಲಂಬನೆಯಲ್ಲಿಟ್ಟು (kept in abeyance) ಒಂದು ವರ್ಷದ ಅವಧಿಗೆ ಅಥವಾ ಶ್ರೀ ಎಸ್.ಶ್ರೀಧರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ಸೇವೆಯು ಜಲಸಂಪನ್ಮೂಲ ಇಲಾಖೆಯಲ್ಲಿ ಅಗತ್ಯವಿರುವವರೆಗೆ– ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಶೇಷಾಧಿಕಾರಿ (ವಿಶ್ವಬ್ಯಾಂಕ್) ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1488 ಸೇ–3 2009, ದಿನಾಂಕ: 12–08–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

ಪಿ.ಆರ್. 2188

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿನ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 2006, ದಿನಾಂಕ: 08–06–2006
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 41 ಸಸಿವಿ 2007, ದಿನಾಂಕ: 08–10–2007
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 586 ಸಅಸೇ 2008, ದಿನಾಂಕ: 11–07–2008
4. ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 362 ಸೇಸಎ 2009, ದಿನಾಂಕ: 10–07–2009

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ಮತ್ತು (2) ರಲ್ಲಿ ಓದಲಾದ ದಿನಾಂಕ: 08–06–2006ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಿ ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 11–07–2008ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ:08.06.2008 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ನಬಾರ್ಡ್ ಯೋಜನೆಯಡಿ ಈಗಾಗಲೇ ಮಂಜೂರಾಗಿರುವ ಸುಮಾರು 600 ಕೋಟಿ ರೂ.ಗಳ ಕಾಮಗಾರಿಗಳಿರುವುದಲ್ಲದೇ ಪ್ರಸ್ತುತ 2009–2010ನೇ ಸಾಲಿಗೆ 230.00 ಕೋಟಿ ರೂ.ಗಳ ಪ್ರಸ್ತಾವನೆಯು ಮಂಜೂರಾಗಿರುವುದರಿಂದ ಹಾಗೂ ಆಡಳಿತ ಹಿತದೃಷ್ಟಿಯಿಂದ, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ದಿನಾಂಕ: 08–06–2009ರಿಂದ ಮತ್ತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 387 ಸಅಸೇ 2009, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2009**

ಕರ್ನಾಟಕ ಸರ್ಕಾರದ ಸಚಿವಾಲಯದ ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ದಿನಾಂಕ: 08–06–2009ರಿಂದ ಮತ್ತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

ಪಿ.ಆರ್. 2189

**ವಿಷಯ:** ಜಂಟಿ ಇಲಾಖಾ ವಿಚಾರಣೆ; 1. ಶ್ರೀ ಆರ್. ಶ್ರೀನಿವಾಸ್ ಮುಖ್ಯ ಇಂಜಿನಿಯರ್, 2. ಶ್ರೀ ಶಂಕರೇಗೌಡ, ಅಧೀಕ್ಷಕ ಇಂಜಿನಿಯರ್, 3. ಶ್ರೀ ಎಸ್. ಗೋಪಾಲ, ಕಾರ್ಯಪಾಲಕ ಇಂಜಿನಿಯರ್, 4. ಶ್ರೀ ಎನ್.ಸಿ.ಉದಯಕುಮಾರ್, 5. ಶ್ರೀ ಎಂ.ಜಿ.ಸೋಮಶೇಖರ್, 6. ಶ್ರೀ ಎಸ್.ಪುಲಿಕೇಶಿ ರೆಡ್ಡಿ– ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳು, 7. ಶ್ರೀ ಹೆಚ್.ಎಂ.ಶಶಿಧರ್, 8. ಶ್ರೀ ಗಂಗಾಧರ್, 9. ಶ್ರೀ ಕೆ.ಪಿ.ಶಾಂತೇಗೌಡ, ಸಹಾಯಕ ಇಂಜಿನಿಯರ್‌ಗಳು, 10. ಶ್ರೀ ಬಿ.ಕೆ ಹಿರಣ್ಣಯ್ಯ, 11. ಶ್ರೀ ಸಿ.ಎಲ್.ಮುನಿರಾಜು, 12. ಶ್ರೀ ಎ.ಸಿ.ಕುಮಾರಸ್ವಾಮಿ, 13. ಶ್ರೀ ಕೆ.ಅಬ್ದುಲ್ ರಜಾಕ್–ಕಿರಿಯ ಇಂಜಿನಿಯರ್‌ಗಳು–ಅವರುಗಳ ವಿರುದ್ಧ

**ಓದಲಾಗಿದೆ:** 1. ಕಡತ ಸಂಖ್ಯೆ: ಲೋಇ 318 ಸೇಇವಿ 2008, ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಬಂದರು ಹಾಗು ಒಳನಾಡು ಜಲಸಾರಿಗೆ ಇಲಾಖೆ.

**ಪ್ರಸ್ತಾವನೆ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಅವರು ಮೇಲೆ ಓದಲಾದ ಕಡತವನ್ನು ದಿನಾಂಕ 24.06.2009ರಂದು ಸಿಆಸು ಇಲಾಖೆಗೆ ಕಳುಹಿಸಿ ಈ ಕೆಳಕಂಡ ಅಧಿಕಾರಿಗಳು ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಲಯ. ಈ ಹುದ್ದೆಯಲ್ಲಿ ಹಾಗೂ ಸದರಿ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ರಾಷ್ಟ್ರೀಯ ಹೆದ್ದಾರಿ 48 ಕಿ.ಮೀ 226 ರಿಂದ 264ರವರೆಗಿನ (ಶಿರಾಡಿ ಘಾಟ್) ರಸ್ತೆಯ ಕಾಮಗಾರಿಯನ್ನು ನಿರ್ವಹಿಸುವಾಗ ಕಳಪೆಯಾಗಿ ಕಾರ್ಯನಿರ್ವಹಿಸಿ ಹಾಗೂ ಕಳಪೆ ಡಾಂಬರೀಕರಣ ಮಾಡಿಸಿ, ಗುಣ ನಿಯಂತ್ರಣ ಪರೀಕ್ಷೆಗಳಿಗೆ ಅನುಗುಣವಾಗಿ ಸಮರ್ಪಕ ಕಾರ್ಯನಿರ್ವಹಿಸದೇ ಸರ್ಕಾರಕ್ಕೆ ಕೋಟ್ಯಾಂತರ ರೂ. ನಷ್ಟವನ್ನು ಉಂಟು ಮಾಡಿ ದುರ್ನಡತೆ ಎಸಗಿದ್ದಾರೆಂದು ವರದಿ ಮಾಡಿದ್ದಾರೆ.

1. ಶ್ರೀ ಆರ್.ಶ್ರೀನಿವಾಸ್ ಮುಖ್ಯ ಇಂಜಿನಿಯರ್
2. ಶ್ರೀ ಶಂಕರೇಗೌಡ, ಅಧೀಕ್ಷಕ ಇಂಜಿನಿಯರ್
3. ಶ್ರೀ ಎಸ್.ಗೋಪಾಲ, ಕಾರ್ಯಪಾಲಕ ಇಂಜಿನಿಯರ್
4. ಶ್ರೀ ಎನ್.ಸಿ.ಉದಯಕುಮಾರ್
5. ಶ್ರೀ ಎಂ.ಜಿ.ಸೋಮಶೇಖರ್
6. ಶ್ರೀ ಎಸ್.ಪುಲಿಕೇಶಿ ರೆಡ್ಡಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳು
7. ಶ್ರೀ ಹೆಚ್.ಎಂ.ಶಶಿಧರ್
8. ಶ್ರೀ ಗಂಗಾಧರ್
9. ಶ್ರೀ ಕೆ.ಪಿ.ಶಾಂತೇಗೌಡ, ಸಹಾಯಕ ಇಂಜಿನಿಯರ್‌ಗಳು
10. ಶ್ರೀ ಬಿ.ಕೆ.ಹಿರಣ್ಣಯ್ಯ
11. ಶ್ರೀ ಸಿ.ಎಲ್.ಮುನಿರಾಜು
12. ಶ್ರೀ ಎ.ಸಿ.ಕುಮಾರಸ್ವಾಮಿ
13. ಶ್ರೀ ಕೆ.ಅಬ್ದುಲ್ ರಜಾಕ್– ಕಿರಿಯ ಇಂಜಿನಿಯರ್‌ಗಳು

ತೀವ್ರ ದುರ್ನಡತೆ ಎಸಗಿದಕ್ಕಾಗಿ ಮೇಲಿನ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸುವಂತೆ ಪ್ರಧಾನ ಕಾರ್ಯದರ್ಶಿಯವರು ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಆರೋಪಿತ ಅವ್ಯವಹಾರ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಬೇಕೆಂದು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 12 ಇಮುವಿ 2009 ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ರಲ್ಲಿ ಪ್ರಸತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಮುಂದೆ ತಿಳಿಸಿದ ಆರೋಪಿತ ಅಧಿಕಾರಿಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಇಂದೇ ವ್ಯವಹರಣೆಯಲ್ಲಿ ಶಿಸ್ತುಕ್ರಮವನ್ನು ಜರುಗಿಸಬೇಕೆಂದು ಈ ಮೂಲಕ ಆದೇಶಿಸಿದೆ.

1. ಶ್ರೀ ಆರ್.ಶ್ರೀನಿವಾಸ್ ಮುಖ್ಯ ಇಂಜಿನಿಯರ್
2. ಶ್ರೀ ಶಂಕರೇಗೌಡ, ಅಧೀಕ್ಷಕ ಇಂಜಿನಿಯರ್
3. ಎಸ್.ಗೋಪಾಲ, ಕಾರ್ಯಪಾಲಕ ಇಂಜಿನಿಯರ್
4. ಶ್ರೀ ಎನ್.ಸಿ.ಉದಯಕುಮಾರ್
5. ಶ್ರೀ ಎಂ.ಜಿ.ಸೋಮಶೇಖರ್
6. ಶ್ರೀ ಎಸ್.ಪುಲಿಕೇಶಿ ರೆಡ್ಡಿ ಸಹಾಯಕ ಕಾರ್ಯಪಾಲ ಇಂಜಿನಿಯರ್‌ಗಳು

7. ಶ್ರೀ ಹೆಚ್.ಶಶಿಧರ್
8. ಶ್ರೀ ಗಂಗಾಧರ್
9. ಶ್ರೀ ಕೆ.ಪಿ.ಶಾಂತೇಗೌಡ, ಸಹಾಯಕ ಇಂಜಿನಿಯರ್‌ಗಳು
10. ಶ್ರೀ ಬಿ.ಕೆ.ಹಿರಣ್ಣಯ್ಯ
11. ಶ್ರೀ ಸಿ.ಎಲ್.ಮುನಿರಾಜು
12. ಶ್ರೀ ಎ.ಸಿ.ಕುಮಾರಸ್ವಾಮಿ
13. ಶ್ರೀ ಕೆ.ಅಬ್ದುಲ್ ರಜಾಕ್– ಕಿರಿಯ ಇಂಜಿನಿಯರ್‌ಗಳು

ಅಲ್ಲದೇ ಒಂದೇ ವ್ಯವಹರಣೆಗಳ ಉದ್ದೇಶಕ್ಕಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಅವರು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸತಕ್ಕದ್ದು.

ಶ್ರೀ ಆರ್.ಶ್ರೀನಿವಾಸ್ ಮುಖ್ಯ ಇಂಜಿನಿಯರ್ ಅವರನ್ನು ಉಳಿದು, ಇತರೆ ಆರೋಪಿಗಳ ವಿರುದ್ಧ ಅವರು ಸಕ್ಷಮ ಪ್ರಾಧಿಕಾರಿಯ ಅನುಮೋದನೆಯೊಡನೆ ಯಾವುದೇ ದಂಡನೆಯನ್ನು ವಿಧಿಸಲು ಅಧಿಕಾರ ಹೊಂದಿರುತ್ತಾರೆ.

ಶ್ರೀ ಆರ್.ಶ್ರೀನಿವಾಸ್ ಮುಖ್ಯ ಇಂಜಿನಿಯರ್, ಇವರಿಗೆ ದಂಡನೆಯನ್ನು ವಿಧಿಸುವ ಪ್ರಮೇಯ ಬಂದಲ್ಲಿ ವಿಚಾರಣಾ ವರದಿಯನ್ನು ದಾಖಲೆಗಳೊಡನೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸತಕ್ಕದ್ದು.

ಈ ವ್ಯವಹರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಾಮವಳಿ 1957ರ ನಿಯಮ 11, 11ಎ ನಿಗಧಿಪಡಿಸಿರುವ ಕಾರ್ಯವಿಧಾನಗಳನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 2190 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

## ಸಹಕಾರ ಸಚಿವಾಲಯ

**ವಿಷಯ:** 2007–08ನೇ ಸಾಲಿನಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಪೈಕಿ ವಸೂಲಾದ ಸಾಲಗಳ ಮೇಲಿನ ಬಡ್ಡಿ ಸಹಾಯಧನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಒ 89 ಸಿಎಲ್‌ಎಸ್ 2008 ದಿನಾಂಕ: 16.01.2009
2. ಸರ್ಕಾರಿ ಆದೇಶ ಸಂಖ್ಯೆ: ಸಿಒ 89 ಸಿಎಲ್‌ಎಸ್ 2008 ದಿನಾಂಕ: 19.03.2009
3. ಸರ್ಕಾರಿ ಆದೇಶ ಸಂಖ್ಯೆ: ಸಿಒ 89 ಸಿಎಲ್‌ಎಸ್ 2008 ದಿನಾಂಕ: 05.06.2009
4. ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ: ಸಿಆರ್‌ಡಿ/11/ಕೆಆರ್‌ಎಫ್/2008–09 ದಿನಾಂಕ:07.08.2009

**ಪ್ರಸ್ತಾವನೆ:**

ಮೇಲೆ ಓದಲಾದ (1), (2), ಮತ್ತು (3) ರ ಆದೇಶಗಳಲ್ಲಿ 2007–08ನೇ ಸಾಲಿನಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಪೈಕಿ ವಸೂಲಾದ ಸಾಲಗಳ ಮೇಲಿನ ಬಡ್ಡಿ ಸಹಾಯಧನ ರೂ.55.00 ಕೋಟಿಗಳು, ರೂ.62.25 ಕೋಟಿಗಳು ಹಾಗೂ ರೂ.30.80 ಕೋಟಿಗಳನ್ನು ಅನುಕ್ರಮವಾಗಿ ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (4) ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2007–08ನೇ ಸಾಲಿನಲ್ಲಿ ಡಿಸಿಸಿ ಬ್ಯಾಂಕುಗಳು ನೀಡಿದ ಸಾಲಗಳ ಪೈಕಿ ಬಿಡುಗಡೆಗೆ ಬಾಕಿ ಇರುವ ಬಡ್ಡಿ ಸಹಾಯಧನ ರೂ.1139.08 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ. ಸದರಿ ಕೋರಿಕೆಯನ್ನು ಪರಿಗಣಿಸಿ ರೂ.5.00 ಕೋಟಿಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 206 ಸಿಎಲ್‌ಎಸ್ 2009 ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2007–08ನೇ ಸಾಲಿನಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಪೈಕಿ ವಸೂಲಾದ ಸಾಲಗಳ ಮೇಲಿನ ಬಡ್ಡಿ ಸಹಾಯಧನದ ಬಾಬ್ತು 2009–10ನೇ ಸಾಲಿನ ಆಯವ್ಯಯದಲ್ಲಿ ಲಭ್ಯವಿರುವ ಅನುದಾನ ಪೈಕಿ ರೂ.5.00 ಕೋಟಿಗಳನ್ನು (ರೂಪಾಯಿ ಐದು ಕೋಟಿಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ '2425–00–107–2–14–ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ –106–ಸಹಾಯಧನ' ಅಡಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಸಹಕಾರ ಸಂಘಗಳ ನಿಬಂಧಕರ ಕಚೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/245/ವೆಚ್ಚ–2/09 ದಿನಾಂಕ: 25.08.2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 2191

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## INFORMATION TECHNOLOGY, BIOTECHNOLOGY AND SCIENCE & TECHNOLOGY SECRETARIAT

**Sub:** Global Investors Meet – 2010 Constitution of Task Force for IT and BT Investment Promotion.

**Preamble:**

Government of Karnataka has decided to conduct Global Investors Meet on 11th and 12th of January 2010 to attract the investments from the potential investors across the world. Since Karnataka State is globally renowned for IT and BT sectors, it is quite necessary that these sectors require a separate focus and thrust during the 'Global Investors Meet'.

Hence, for effective co-ordination between various departments and IT BT companies, it is felt necessary to constitute taskforce for IT BT Investment Promotion for planning, co-ordinating, review and moitoring the various activities related to 'Global Investors Meet'. Hence, the following orders.

**Government Order No ITD 60 ADM 2009, Bangalore, Dated: 16th September 2009**

In the circumstances stated above, the Taskforce for IT and BT Investnent Promotion is constituted for planning, co-ordinating, review and monitoring the various activities related to 'Global Investors Meet' to he held in January 2010 with the following members:-

| | | |
|---|---|---|
| 1 | Hon'ble Minister for Excise, BWSSB, Information, IT & BT | Chairman |
| 2 | CMD Wipro | Member |
| 3 | CMD, Biocon | Member |
| 4 | CEO Infosys | Member |
| 5 | Chairman, ISA | Member |
| 6 | President, ABLE, | Member |
| 7 | Director, STPI | Member |
| 8 | CEO, Prestige Group | Member |
| 9 | CEO, Embassy Group | Member |
| 10 | Principal Secretary, C&I | Member |
| 11 | Principal Secretary, UDD | Member |
| 12 | Principal Secretary, e-Governance | Member |
| 13 | Secretary, Revenue Department | Member |
| 14 | Commissioner, BDA | Member |
| 15 | Director, IT and BT | Member |
| 16 | CEO, KIADB | Member |
| 17 | MD, KUM | Member |
| 18 | Regional Director, NASSCOM | Member |
| 19 | Regional Director, MAIT | Member |

20 Sri Uday Garudachar Member

21 Principal Secretary, IT, BT and S&T Dept Member Secretary

By Order and in the name of the Governor of Karnataka

P.R. 2192

**S. INDUMATHI**

Deputy Secretary to Government, Department of IT, BT and S & T

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ವಾಕೈ 240 ರೇಇವಿ 2005, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2009**

ಸರ್ಕಾರಿ ಆದೇಶ ಸಂಖ್ಯೆ: ವಾಕೈ 240 ರೇಇವಿ 2005, ದಿನಾಂಕ: 11–4–2007ರ ಆದೇಶದ ಭಾಗದ 7ನೇ ಸಾಲಿನಲ್ಲಿರುವ ರೂ.1,21,205–00ಗಳ ಉಪದಾನ ಮೊತ್ತಕ್ಕೆ ಒಟ್ಟು ಬಡ್ಡಿ, ಸದರಿ ವಿಳಂಬ ಅವಧಿಗೆ ರೂ.36,147/– ಎಂದು ಇರುವುದನ್ನು ರೂ.1,21,205–00ಗಳ ಉಪದಾನ ಮೊತ್ತಕ್ಕೆ ವಿಳಂಬದ ಅವಧಿಗೆ ಒಟ್ಟು ಬಡ್ಡಿ ರೂ.22,517/– ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2199

**ಭಾರತಿ ಆರ್.ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ಗಂಡೋರಿನಾಲಾ ಜಲಾಶಯವನ್ನು "ದಿವಗಂತ ಚಂದ್ರಶೇಖರ ಪಾಟೀಲ ಮಹಾಗಾಂವ ಜಲಾಶಯ" ಎಂದು ಪುನರ್ ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಅಭಿಯಂತರರು, ಕರ್ನಾಟಕ ನೀರಾವರಿ ನಿಗಮ ನಿಯಮಿತ, ನೀರಾವರಿ ಯೋಜನೆಗಳ ವಲಯ, ಗುಲಬರ್ಗಾ ಇವರ ಪತ್ರ ಸಂಖ್ಯೆ:ಕನೀನಿ/ನಿಯೋವ/ಮುಇಂಗು/ತಾಸ–3/ಸಇಂ–3/2009–10/2263/1, ದಿನಾಂಕ: 18–08–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಹಿಂದುಳಿದ ಹೈದ್ರಾಬಾದ ಕರ್ನಾಟಕ ಭಾಗದಲ್ಲಿ ಹಲವಾರು ನೀರಾವರಿ ಯೋಜನೆಗಳನ್ನು ಹುಟ್ಟು ಹಾಕಿ ಕಾರ್ಯಗತಗೊಳಿಸುವ ಕಲ್ಪನೆ ಹೊಂದಿದ್ದ ಗುಲ್ಬರ್ಗಾ ಮತ ಕ್ಷೇತ್ರದ ಮಾಜಿ ಶಾಸಕರು ಮತ್ತು ಸ್ವತಂತ್ರ ಹೋರಾಟಗಾರರಾಗಿದ್ದ ದಿವಂಗತ ಚಂದ್ರಶೇಖರ ಪಾಟೀಲ ಮಹಾಗಾಂವ ಇವರ ಹೆಸರನ್ನು ಗಂಡೋರಿನಾಲಾ ಜಲಾಶಾಯಕ್ಕೆ ಇಡಬೇಕೆನ್ನುವ ಅಭಿಲಾಷೆಯನ್ನು ಈ ಭಾಗದ ಜನರು, ಸ್ಥಳೀಯ ಸಂಸ್ಥೆಯವರು ಮತ್ತು ಪ್ರಜಾಪ್ರತಿನಿಧಿಗಳು ವ್ಯಕ್ತಪಡಿಸುತ್ತಿದ್ದು, ಗುಲ್ಬರ್ಗಾ ಜಿಲ್ಲೆಯ ಹಲವು ನೀರಾವರಿ ಯೋಜನೆಗಳು ಅವರ ಕನಸಾಗಿತ್ತೆಂದು, ಈ ಭಾಗದ ಎಲ್ಲ ಜನರು ಒಟ್ಟುಗೂಡಿ ಗುಲ್ಬರ್ಗಾ ಜಿಲ್ಲೆಯ ಪ್ರತಿಯೊಂದು ತಾಲ್ಲೂಕಿನಲ್ಲೂ ಹಸಿರು ಕ್ರಾಂತಿಯನ್ನು ಸಾಧಿಸುವ ಮತ್ತು ಅದರಂತೆ ಸಮಗ್ರ ಅಭಿವೃದ್ಧಿ ಹೊಂದುವ ಆಶಯವನ್ನು ಮಾನ್ಯರು ಪಟ್ಟಿದ್ದರೆಂದೂ ಸ್ಥಳೀಯ ವಿಚಾರಣೆಗಳಿಂದ ತಿಳಿದಿರುವುದಾಗಿ ವರದಿ ಮಾಡಿರುತ್ತಾರೆ.

ಗಂಡೋರಿನಾಲಾ ಮಧ್ಯಮ ನೀರಾವರಿ ಯೋಜನೆಯ ಅಣೆಕಟ್ಟು ದಿವಂತರ ಸ್ವಗ್ರಾಮವಾದ ಮಹಾಗಾಂವ ಗ್ರಾಮದ ಸಮೀಪದಲ್ಲಿ ಇದ್ದು, ಗುಲ್ಬರ್ಗಾ ಮತ್ತು ಚಿತ್ತಪೂರ ತಾಲೂಕಿನ ಒಟ್ಟು 8,094 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ಕಲ್ಪಿಸುವ ಯೋಜನೆ ಇದಾಗಿದೆ.

ದಿನಾಂಕ: 12–01–2009 ರಂದು ಜರುಗಿರುವ ಗುಲ್ಬರ್ಗಾ ಜಿಲ್ಲಾ ಪಂಚಾಯತ್‌ನ 12ನೇ ವಾರ್ಷಿಕ ಸಾಮಾನ್ಯ ಸಭೆಯಲ್ಲಿ ಈ ಭಾಗದ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ದಿವಂಗತ ಚಂದ್ರಶೇಖರ ಪಾಟೀಲ ಮಹಾಗಾಂವ ಇವರ ಹೆಸರನ್ನು ಗಂಡೋರಿನಾಲಾ ಜಲಾಶಯಕ್ಕೆ ಇಡಲು ಸರ್ವಾನುಮತದ ನಿರ್ಣಯವನ್ನು ಕೈಗೊಂಡು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 158 ವಿಬ್ಯಾಇ 2008, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2009**.

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕಿನಲ್ಲಿರುವ ಗಂಡೋರಿನಾಲಾ ಜಲಾಶಯವನ್ನು "ದಿವಂಗತ ಚಂದ್ರಶೇಕರ ಪಾಟೀಲ ಮಹಾಗಾಂವ ಜಲಾಶಯ" ಎಂದು ಪುನರ್ ನಾಮಕರಣ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಶ್ರೀಧರ್**

ಪಿ.ಆರ್. 2203

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ(ವಿ.ಬ್ಯಾ.ಯೋ).

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಭೌಗೋಳಿಕ ಮಾಹಿತಿ ಪದ್ಧತಿಕೋಶ ಪ್ರಾರಂಭಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 30 ಅಡವಿ 2009 ದಿನಾಂಕ: 12–05–09.

(2) ಸರ್ಕಾರಿ ಅದೇಶ ಸಂಖ್ಯೆ: ಮಾತಂಇ 41 ಆಡವಿ 2009 ದಿನಾಂಕ: 6–6–09

(3) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 41 ಆಡವಿ 2009 ದಿನಾಂಕ: 14–07–09

(4) ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರರವರ ಪತ್ರ ಸಂ: ಕಾದೂಸಂಅಕೇಂ/74/ಜಿಇಎನ್/2009, ದಿನಾಂಕ: 14–8–09, 02–09–2009 ಮತ್ತು 11–09–2009.

**ಪ್ರಸ್ತಾವನೆ:**

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]" ರಡಿಯಲ್ಲಿ ರೂ. 680.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಮೊದಲನೆಯ ಕಂತಿನ ಅನುದಾನವಾಗಿ ರೂ. 37.50 ಲಕ್ಷಗಳ ಅನುದಾವನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲಾಗಿದೆ.ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 37.50 ಲಕ್ಷಗಳ ಹಾಗೂ ಕೇಂದ್ರದ ವತಿಯಿಂದ ನಡೆಸಲು ಉದ್ದೇಶಿಸಲಾಗಿರುವ ಸಮ್ಮೇಳನ, ಸಂಕೀರ್ಣ ಮತ್ತು ಕಾರ್ಯಗಾರಗಳಿಗೆ ಉಪಯೋಗಿಸಲು ರೂ. 15.00 ಲಕ್ಷಗಳನ್ನು ಅಂದರೆ ಒಟ್ಟು ರೂ. 52.50 ಲಕ್ಷಗಳನ್ನು 2ನೇ ತ್ರೈಮಾಸಿಕ ಕಂತಿನ ಅನುದಾನವಾಗಿ ಬಿಡುಗಡೆ ಮಾಡಲಾಗಿದೆ.

ಮೇಲೆ (4) ರಲ್ಲಿ ಓದಲಾದ ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರ ಪತ್ರದಲ್ಲಿ ರಾಜ್ಯದ 27 ಜಿಲ್ಲೆಗಳಲ್ಲಿಯೂ ಭೌಗೋಳಿಕ ಮಾಹಿತಿ ಪದ್ಧತಿ ಕೋಶಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗಿದ್ದು, 19 ಜಿಲ್ಲೆಗಳಲ್ಲಿ ಜಿಲ್ಲಾ ಪಂಚಾಯಿತಿಯ ಕಚೇರಿಯಲ್ಲಿ ನೀಡಲಾಗಿರುವ ಸ್ಥಳಾವಕಾಶದಲ್ಲಿ ಸದರಿ ಕೋಶಗಳನ್ನು ಪ್ರಾರಂಭಿಸಲಾಗಿದ್ದು, ಪ್ರತಿಯೊಂದು ಜಿಲ್ಲೆಗಳಲ್ಲಿಯೂ ಎರಡು ಹುದ್ದೆಗಳನ್ನು ಭರ್ತಿ ಮಾಡಲಾಗುತ್ತಿದ್ದು, ಮಾಹೆಯಾನ ಅಂದಾಜು ವೇತನ ರೂ. 20,000/–ಗಳಾಗಿದ್ದು, ಕಚೇರಿಯ ನಿರ್ವಹಣೆಗಾಗಿ ಮಾಹೆಯಾನ ಕನಿಷ್ಠ ರೂ.1000/–ಗಳ ಅವಶ್ಯಕತೆ ಇದ್ದು, ಈ ಪ್ರಕಾರ ಪ್ರತಿಯೊಂದು ಜಿಲ್ಲೆಗೆ ಮಾಹೆಯಾನ ರೂ. 21,000/– ಗಳವರೆಗೆ ವೆಚ್ಚವು ತಗಲುತ್ತಿದ್ದು, ಅದರಂತೆ ಒಟ್ಟು 25 ಜಿಲ್ಲೆಗಳಿಗೆ ಒಟ್ಟು ರೂ. 45.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಒದಗಿಸಲಾದ ರೂ. 680.00 ಲಕ್ಷಗಳಲ್ಲಿ ಭೌಗೋಳಿಕ ಮಾಹಿತಿ ಪದ್ದತಿ ಕೋಶಗಳ ಅನುಷ್ಠಾನಕ್ಕಾಗಿ ನಿಗದಿಪಡಿಸಲಾಗಿರುವ ರೂ. 45.00 ಲಕ್ಷಗಳ ಅನುದಾನದ ಪೈಕಿ ಸದರಿ ಕೇಂದ್ರಕ್ಕೆ ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 41 ಎಡಿಎಂ 2009, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಒದಗಿಸಲಾದ ರೂ. 680.00 ಲಕ್ಷಗಳ ಅನುದಾನದಲ್ಲಿ ಭೌಗೋಳಿಕ ಮಾಹಿತಿ ಪದ್ಧತಿ ಯೋಜನೆಯ ಅನುಷ್ಠಾನಕ್ಕಾಗಿ ನಿಗದಿಪಡಿಸಲಾಗಿರುವ ರೂ. 45.00 ಲಕ್ಷಗಳ ಅನುದಾನದ ಪೈಕಿ ರೂ.25.00 ಲಕ್ಷಗಳ ಅನುದಾನವನ್ನು [ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ] ಸದರಿ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು[ಯೋಜನೆ]"** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು,

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16.5.09ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ.ಕೃಷ್ಣಮೂರ್ತಿ**

ಪಿ.ಆರ್. 2204

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಡಾ:ಕಿಶೋರಿ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸಿರುವ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ:**
1) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂ: ಡಿಪಿಜಿ/ಮೈವಿ/29/2003–04 ದಿನಾಂಕ: 10/06/2004, 04/03/2008 ಮತ್ತು 24/07/2008.
2) ಸರ್ಕಾರದ ಆದೇಶ ಸಂಖ್ಯೆ: ಆಕುಕ 729 ಹೆಚ್ಎಸ್ಹೆಚ್ 2007 ದಿನಾಂಕ: 06/10/2008.
3) ಮಹಾಲೇಖಪಾಲರ ಕಚೇರಿಯ ಪತ್ರ ಸಂ: GE XIV/M12/2008-09/755 ದಿನಾಂಕ: 22/12/2008.
4) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂ:ಡಿಪಿಜಿ/ಮೈವಿ/29/2003–04 ದಿನಾಂಕ: 30/06/2009.
5) ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರು, ವೆನ್ಲಾಕ್ ಜಿಲ್ಲಾ ಆಸ್ಪತ್ರೆ, ಮಂಗಳೂರು ಇವರ ಅಧಿಕೃತ ಜ್ಞಾಪನಾ ಪತ್ರ ಸಂ: ಸಿಬ್ಬಂದಿ(1) ಜೆಆರ್ಒ 46/04–10 ದಿನಾಂಕ: 14/08/2009.
6) ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂ: 3581/2009 ರ ಮೇಲಿನ ಮಧ್ಯಂತರ ಆದೇಶ ದಿನಾಂಕ: 18/08/2009.
7) ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರು, ವೆನ್ಲಾಕ್ ಜಿಲ್ಲಾ ಆಸ್ಪತ್ರೆ, ಮಂಗಳೂರು ಇವರ ಪತ್ರ ಸಂ:ಸಿಬ್ಬಂದಿ(1)ಜೆಆರ್ಒ/46/04–10ದಿನಾಂಕ: 19/08/2009.
8) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂ: ಡಿಪಿಜಿ/ಮೈವಿ/29/2003–04 ದಿನಾಂಕ 29/08/2009.

**ಪ್ರಸ್ತಾವನೆ:**

ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ಪತ್ರಗಳಲ್ಲಿ ಕೋರಿರುವಂತೆ ಉಲ್ಲೇಖ (2) ರ ಸರ್ಕಾರದ ಆದೇಶದಲ್ಲಿ ಡಾ. ಕಿಶೋರಿ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ ಇವರನ್ನು ಕರ್ನಾಟಕ ನಾಗರಿಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977 ರ ಉಪನಿಯಮ 6ರಡಿಯಲ್ಲಿ ದಿನಾಂಕ 08/07/2001ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶ ಹೊರಡಿಸಲಾಗಿದೆ. ಮಹಾಲೇಖಪಾಲರ ಕಚೇರಿಯಿಂದ ಬಂದ ಉಲ್ಲೇಖ (3) ರ ಪತ್ರದಲ್ಲಿ ಸಾರ್ವಜನಿಕ ಆಸ್ಪತ್ರೆ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದ ಡಾ:ಕಿಶೋರಿ ಮತ್ತು ಡಾ: ಕಿಶೋರಿ ಪಿ. ಹಿರಿಯ ತಜ್ಞರು ಜಿಲ್ಲಾ ವೆನ್ಲಾಕ್ ಆಸ್ಪತ್ರೆ, ಮಂಗಳೂರು ಇವರಿಬ್ಬರೂ ಬೇರೆ ಬೇರೆ ಎಂದು ಭಾವಿಸಲಾಗಿದ್ದು, ಇದನ್ನು ದೃಢೀಕರಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಆಯುಕ್ತರಿಂದ ಸ್ಪಷ್ಟೀಕರಣ ಕೋರಲಾಗಿ, ಉಲ್ಲೇಖ (4)ರ ಪತ್ರದಲ್ಲಿ ಡಾ:ಕಿಶೋರಿ ಇವರೇ ಪ್ರಸ್ತುತ ಹಿರಿಯ ತಜ್ಞರಾಗಿ ಜಿಲ್ಲಾ ವೆನ್ಲಾಕ್ ಆಸ್ಪತ್ರೆ, ಮಂಗಳೂರು ಇಲ್ಲಿ ಕಾರ್ಯ ನಿರ್ವಹಿಸುತ್ತಿರುವುದಾಗಿ ವರದಿ ಮಾಡಿರುತ್ತಾರೆ.

ಉಲ್ಲೇಖ(2) ರ ಆದೇಶದನ್ವಯ ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರು, ವೆನ್ಲಾಕ್ ಜಿಲ್ಲಾ ಆಸ್ಪತ್ರೆ ಮಂಗಳೂರು ಇವರು ಡಾ. ಕಿಶೋರಿ ಇವರನ್ನು ಉಲ್ಲೇಖ (5) ರ ಅಧಿಕೃತ ಜ್ಞಾಪನದಲ್ಲಿ ಸೇವೆಯಿಂದ ವಿಮೋಚನೆಗೊಳಿಸಿರುತ್ತಾರೆ. ಡಾ. ಕಿಶೋರಿ ಪಿ. ಇವರು ಉಲ್ಲೇಖ(2)ರ ಆದೇಶ ಮತ್ತು ಉಲ್ಲೇಖ (5)ರ ಅಧಿಕೃತ ಜ್ಞಾಪನದ ವಿರುದ್ಧ ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಬೆಂಗಳೂರು ಇಲ್ಲಿ ಅರ್ಜಿ ಸಂಖ್ಯೆ 3581/2009 ಸಲ್ಲಿಸಿ ಉಲ್ಲೇಖ(6) ರಂತೆ ಮಧ್ಯಂತರ ಆದೇಶವನ್ನು ಪಡೆದಿರುವುದರಿಂದ ಡಾ:ಕಿಶೋರಿ ಪಿ. ಹಿರಿಯ ತಜ್ಞರು, ಇವರನ್ನು ಸೇವೆಯಲ್ಲಿ ಮುಂದುವರಿಸಿರುವುದಾಗಿ ಉಲ್ಲೇಖ (7) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಈ ಮಧ್ಯೆ, ಆಯುಕ್ತರು ಉಲ್ಲೇಖ(8) ರ ಪತ್ರದಲ್ಲಿ ಡಾ: ಕಿಶೋರಿ,ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ ಇವರು ಮತ್ತು ಪ್ರಸ್ತುತ ಜಿಲ್ಲಾ ವೆನ್ಲಾಕ್ ಆಸ್ಪತ್ರೆ, ಮಂಗಳೂರು ಇಲ್ಲಿ ಹಿರಿಯ ತಜ್ಞರಾಗಿ ಕಾರ್ಯ ನಿರ್ವಹಿಸುತ್ತಿರುವ ಡಾ:ಕಿಶೋರಿ ಪಿ. ಒಬ್ಬರೇ ಆಗಿದ್ದು, ಸದರಿ ವೈದ್ಯರನ್ನು ಸೇವೆಯಿಂದ ವಿಮೋಚನೆಗೊಳಿಸಿರುವ ಉಲ್ಲೇಖ(2) ರ ಆದೇಶವನ್ನು ಹಿಂಪಡೆಯುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 355 ಹೆಚ್ಎಸ್ಹೆಚ್ 2009, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ. ಕಿಶೋರಿ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ ಇವರನ್ನು ಕರ್ನಾಟಕ ನಾಗರಿಕ ಸೇವಾ (ಖಾಯಂ ಪೂರ್ವ) ನಿಯಮಾವಳಿ 1977 ರ ಉಪನಿಯಮ 6ರಡಿಯಲ್ಲಿ ದಿನಾಂಕ 08/07/2001ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ: ಆಕುಕ 729 ಹೆಚ್ಎಸ್ಹೆಚ್ 2007 ದಿನಾಂಕ: 06/10/2008ನ್ನು ಹಿಂದಕ್ಕೆ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

ಪಿ.ಆರ್. 2220

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಸಿವಿಲ್ ಜಡ್ಜ್(ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಅಪರ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್ ರವರ ಪತ್ರ ಸಂಖ್ಯೆ: ಎಲ್‌ಸಿಎ, ಐ/83/2009, ದಿನಾಂಕ: 12–08–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಸಿವಿಲ್ ಜಡ್ಜ್(ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಅಪರ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸುವಂತೆ ಕೋರಲಾಗಿರುತ್ತದೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 80 ಎಲ್ಎಜಿ 2009, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2009**

ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಸಿವಿಲ್ ಜಡ್ಜ್(ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಅಪರ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ಕಾನೂನು ಅಧಿಕಾರಿಗಳ( ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977 ಷೆಡ್ಯೂಲ್ 6ರ ಪಟ್ಟಿಗೆ ಕ್ರಮ ಸಂಖ್ಯೆ: 88 ಎಂಬುದಾಗಿ ಸೇರಿಸಿಕೊಳ್ಳತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: 410 ವೆಚ್ಚ 10/2009, ದಿನಾಂಕ: 26–08–2009ರಲ್ಲಿ ನೀಡಲಾದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ**

ಪಿ.ಆರ್. 2223

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಿಷಯ:** ಮೈಸೂರಿನಲ್ಲಿ ಹೆಚ್ಚುವರಿಯಾಗಿ ಮತ್ತೊಂದು ಅಪರ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು, ಇವರ ಪತ್ರ ಸಂಖ್ಯೆ: ಎಡಿಎಂಎನ್/ಎ/11457/2008, ದಿನಾಂಕ: 06–12–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮೈಸೂರು ನಗರದ ವಿವಿಧ ನ್ಯಾಯಾಲಯಗಳಲ್ಲಿ ಸುಮಾರು 6000ಕ್ಕೂ ಹೆಚ್ಚು ಸರ್ಕಾರಿ ಮೊಕದ್ದಮೆಗಳು ಬಾಕಿ ಇರುವುದರಿಂದ ಮಂಜೂರಾಗಿರುವ ಮೂರು ಸರ್ಕಾರಿ ವಕೀಲರುಗಳ ಹುದ್ದೆಗಳ ಜೊತೆಗೆ ಮತ್ತೊಂದು ಅಪರ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸುವಂತೆ ಕೋರಲಾಗಿರುತ್ತದೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 64 ಎಲ್ಎಜಿ 2008, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2009**

ಮೈಸೂರಿನಲ್ಲಿ ಹೆಚ್ಚುವರಿಯಾಗಿ ಮತ್ತೊಂದು ಅಪರ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ಕಾನೂನು ಅಧಿಕಾರಿಗಳ(ನೇಮಕಾತಿ ಸೇವಾ ಷರತ್ತುಗಳು) ನಿಯಮಗಳು 1977 ಷೆಡ್ಯೂಲ್ 6ರ ಪಟ್ಟಿಗೆ ಕ್ರಮ ಸಂಖ್ಯೆ: 14 ಎಂಬುದಾಗಿ ಸೇರಿಸಿಕೊಳ್ಳತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: 386 ವೆಚ್ಚ 10/2009, ದಿನಾಂಕ: 10–08–2009ರಲ್ಲಿ ನೀಡಲಾದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ**

ಪಿ.ಆರ್. 2224

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಡಾ: ವಿಜಯಕುಮಾರ್ ಬಿ., ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಯಳವತ್ತಿ, ಶಿರಹಟ್ಟಿ, ಗದಗ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಜೆಆರ್‌ಒ(3) 133/2008–09 ದಿನಾಂಕ: 25–11–2008, ಮತ್ತು 31–01–09

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರಗಳಲ್ಲಿ ಡಾ: ವಿಜಯಕುಮಾರ್ ಬಿ., ವೈದ್ಯಾಧಿಕಾರಿ ಇವರು ದಿನಾಂಕ: 07/07/2007ರಲ್ಲಿ ಸೇವೆಗೆ ಸೇರಿದ್ದು, ಪ್ರಾಥಮಿಕ ಆರೋಗ್ಯ ಕೇಂದ್ರ, ಯಳವತ್ತಿ, ಶಿರಹಟ್ಟಿ, ಗದಗ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಬಿಡುಗಡೆ ಹೊಂದದೆ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ದಿನಾಂಕ: 01/07/2008ರಿಂದ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತಾರೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಗಳು 1977ರ ನಿಯಮ 6(1)(2)ರಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 752 ಹೆಚ್‌ಎಸ್‌ಹೆಚ್ 2008 ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ: ವಿಜಯಕುಮಾರ್ ಬಿ., ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಯಳವತ್ತಿ, ಶಿರಹಟ್ಟಿ, ಗದಗ ಜಿಲ್ಲೆ ಇವರು ಖಾಯಂ ಪೂರ್ವ ಸೇವಾವಧಿಯಲ್ಲಿ ದಿನಾಂಕ: 01/07/2008ರಿಂದ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿ ಕರ್ತವ್ಯ ಚ್ಯುತಿ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6(1)(2) ರಡಿಯಲ್ಲಿ ದಿನಾಂಕ: 01–07–2008ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಪಿ.ಆರ್. 2225

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ವಿಷಯ:** ಡಾ: ನಾಗೇಂದ್ರಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಃ ಜೆಆರ್‌ಒ(3)249/2008–09 ದಿನಾಂಕ: 14–07–2009

**ಪ್ರಸ್ತಾವನೆ:**

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ನಾಗೇಂದ್ರಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ ಇವರು ದಿನಾಂಕ: 07–07–2007 ರಂದು ಸರ್ಕಾರಿ ಸೇವೆಗೆ ಸೇರಿದ್ದು ದಿನಾಂಕ: 2/7/2008 ರಿಂದ ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರ ಖಾಯಂಪೂರ್ವ ಸೇವಾವಧಿ ಘೋಷಣೆಯಾಗಿರುವುದಿಲ್ಲ. ಸದರಿ ವೈದ್ಯರು ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಪ್ರೊಬೆಷನರಿ ನಿಯಮಗಳ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 93 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ: ನಾಗೇಂದ್ರಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಸಿದ್ದಾಪುರ, ಉತ್ತರಕನ್ನಡ ಜಿಲ್ಲೆ ಇವರು ದಿನಾಂಕ: 02/07/2008 ರಿಂದ ಖಾಯಂ ಪೂರ್ವ ಸೇವಾಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವನ್ನು ಕರ್ನಾಟಕ ನಾಗರಿಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರಡಿಯಲ್ಲಿ ದಿನಾಂಕ: 02–07–2008ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಪಿ.ಆರ್. 2226

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ಇಂಧನ ಸಚಿವಾಲಯ**

**ವಿಷಯ:** ವಿದ್ಯುತ್ ಪರಿವೀಕ್ಷಣಾಲಯ ಇಲಾಖೆಯಲ್ಲಿ ಹೊಸದಾಗಿ ಸೃಜಿಸಲಾಗಿರುವ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಪೂರ್ವ, ಬೆಂಗಳೂರು, ಇದು ಕಾರ್ಯನಿರ್ವಹಿಸಲು ಕಚೇರಿ ಸ್ಥಳಾಂತರಿಸಿ ಬಾಡಿಗೆ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಇಎನ್ 76 ಇಬಿಎಸ್ 2009 ದಿನಾಂಕ: 22.08.2009.

2. ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಉಮುವಿಪ/ ಬೆಂ.ಪೂ/1819/09–10, ದಿನಾಂಕ:25.08.2009.

3. ಕಾರ್ಯಪಾಲಕ ಇಂಜಿನಿಯರ್ ಬೆಂಗಳೂರುರವರ ಪತ್ರ ಸಂಖ್ಯೆ: ಕಾಇಂ/ವಿವಿ ರಸ್ತೆ ಮತ್ತು ಕಟ್ಟಡಗಳು/ ಸಇ–2: ಬಾಡಿಗೆ/09–10 ದಿನಾಂಕ: 07.08–2009.

4. ಶ್ರೀಮತಿ ಟಿ.ಆರ್. ಲಕ್ಷ್ಮೀ, ಕಟ್ಟಡದ ಮಾಲೀಕರು ಇವರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1) ರ ಆದೇಶದಲ್ಲಿ ವಿದ್ಯುತ್ ಪರಿವೀಕ್ಷಣಾ ಇಲಾಖೆ ಕಚೇರಿಗಳ ಪುನರ್ ವ್ಯವಸ್ಥೆ ಮತ್ತು ಕಾರ್ಯರೂಪಕ್ಕೆ ಬರುವ ಕಚೇರಿಗಳಿಗೆ ಸಿಬ್ಬಂದಿಗಳ ಹಂಚಿಕೆ/ಮರು ವಿನ್ಯಾಸ/ಸ್ಥಳ ಬದಲಾವಣೆ ಕುರಿತಂತೆ ಸರ್ಕಾರಿ ಆದೇಶ ಹೊರಡಿಸಲಾಗಿದೆ.ಸದರಿ ಆದೇಶದನ್ವಯ ಹಾಲಿ ಕಾರ್ಯನಿರ್ವಹಿಸುತ್ತಿದ್ದ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಕೇಂದ್ರಿಯ ಕಚೇರಿಯು, ಕಚೇರಿ ಪುನರ್ ವ್ಯವಸ್ಥೆ ಯೋಜನೆಯಡಿ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಪೂರ್ವ ಕಚೇರಿಯಾಗಿ ಪರಿವರ್ತನೆಗೊಂಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ತಮ್ಮ ಪತ್ರದಲ್ಲಿ ಉಪಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಪೂರ್ವ ರವರ ಕಚೇರಿಯನ್ನು ಹಾಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಪೂರ್ವ, ಮಲ್ಲೇಶ್ವರಂ, ಬೆಂಗಳೂರು ಇಲ್ಲಿ ಕಚೇರಿ ಕೆಲಸ ಕಾರ್ಯಗಳನ್ನು ಪ್ರಾರಂಭಿಸಿದ್ದು,ಸದರಿ ಕಚೇರಿಯಲ್ಲಿ ಸ್ಥಳಾವಕಾಶ ಕಡಿಮೆ ಇರುವುದರಿಂದ ಹೆಚ್ಚಿನ ಸ್ಥಳಾವಕಾಶ ಇರುವ ಬದಲಿ ಕಟ್ಟಡವನ್ನು ಹುಡುಕಲಾಗಿದ್ದು, ಅದು ನಂ. 307, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–55, ಇಲ್ಲಿ ಲಭ್ಯವಿರುವುದಾಗಿ ತಿಳಿಸಿದ್ದು, ಸದರಿ ಕಟ್ಟಡವು ನೆಲಮಹಡಿ, 1ನೇ ಮಹಡಿ ಮತ್ತು 2ನೇ ಮಹಡಿಗಳನ್ನುಹೊಂದಿರುವುದಾಗಿಯೂ ಅಲ್ಲಿ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, 3ವಿದ್ಯುತ್ ಪರಿವೀಕ್ಷಕರು, 3 ಉಪ ವಿದ್ಯುತ್ ಪರಿವೀಕ್ಷಕರು, 7 ಸಹಾಯಕ ವಿದ್ಯುತ್ ಪರಿವೀಕ್ಷಕರು, ಮತ್ತು ಇತರ 5 ಲಿಪಿಕ ವರ್ಗದ ಸಿಬ್ಬಂದಿಗಳಿಗೆ ಸಾಕಗುವಷ್ಟು ಸ್ಥಳಾವಕಾಶ ಇರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಲೋಕೋಪಯೋಗಿ ಇಲಾಖೆಯ ಕಾರ್ಯಪಾಲಕ ಇಂಜಿನಿಯರ್, ರಸ್ತೆ, ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರು ಬಾಡಿಗೆ ನಿಗಧಿ ಪತ್ರವನ್ನು ನೀಡಿರುತ್ತಾರೆ. ಸದರಿ ಪತ್ರದಲ್ಲಿ ನಂ: 307, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–55, ಈ ಕಟ್ಟಡವು 3432.14 ಚದರ ಅಡಿಗಳ ವಿಸ್ತೀರ್ಣ ಹೊಂದಿದ್ದು, ಮಾಸಿಕ ರೂ. 60,000/– (ರೂಪಾಯಿ ಅರವತ್ತು ಸಾವಿರಗಳು ಮಾತ್ರ) ಗಳಂತೆ ನಿಗಧಿಪಡಿಸಿ, ನಿಗಧಿಪಡಿಸಲಾಗಿರುವ ಬಾಡಿಗೆಯು ನ್ಯಾಯ ಸಮ್ಮತವಾಗಿದೆ ಎಂದು ತಿಳಿಸಿರುತ್ತಾರೆ. ಸದರಿ ನಿಗಧಿಪಡಿಸಿರುವ ಬಾಡಿಗೆಗೆ ಮುಖ್ಯ ವಿದ್ಯುತ್ ಪರಿವೀಕ್ಷಕರು, ಸರ್ಕಾರದ ಮಂಜೂರಾತಿ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(4) ರ ಪತ್ರದಲ್ಲಿ ಕಟ್ಟಡದ ಮಾಲೀಕರಾದ ಶ್ರೀಮತಿ. ಟಿ.ಆರ್.ಲಕ್ಷ್ಮೀ, ನಂ: 307, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–55, ಇವರು ತಮ್ಮ ಸ್ವಂತ ಕಟ್ಟಡ ಮೊದಲನೇ ಮತ್ತು ಎರಡನೇಯ ಮಹಡಿಗಳನ್ನು ಹೊಂದಿದ್ದು, ಸರ್ಕಾರದ ವಿದ್ಯುತ್ ಪರಿವೀಕ್ಷಣಾಲಯ ಇಲಾಖೆಯ ಕಚೇರಿಯನ್ನು ತೆರೆಯಲು ಲೋಕೋಪಯೋಗಿ ಇಲಾಖೆ ನಿಗಧಿಪಡಿಸಿರುವ ಬಾಡಿಗೆಗೆ ಅನುಗುಣವಾಗಿ ಒಪ್ಪಿಗೆ ಪತ್ರವನ್ನು ನೀಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 109 ಇಬಿಎಸ್2009 ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2009**

ಮೇಲೆ ವಿವರಿಸಲಾದ ಸಂದರ್ಭದಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿದ್ದ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಕೇಂದ್ರಿಯ ಕಚೇರಿಯು, ಕಚೇರಿ ಪುನರ್ ವ್ಯವಸ್ಥೆ ಯೋಜನೆಯಡಿ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಪೂರ್ವ ಕಚೇರಿಯಾಗಿ ಪರಿವರ್ತನೆಗೊಂಡಿರುವುದರಿಂದ ಮತ್ತು ಸಿಬ್ಬಂದಿ ವರ್ಗದಲ್ಲಿ ಹೆಚ್ಚಳವಾಗಿರುವುದರಿಂದ, 3432.14 ಚದರ ಅಡಿ ಸ್ಥಳ ವಿಸ್ತೀರ್ಣ ಶ್ರೀಮತಿ. ಟಿ.ಆರ್.ಲಕ್ಷ್ಮೀ,ರವರ ಒಡೆತನದ ನಂ:307, ಮೊದಲನೇ ಮತ್ತು ಎರಡನೇ ಮಹಡಿ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–55, ಇಲ್ಲಿಗೆ ಸದರಿ ಕಚೇರಿಯನ್ನು ಸ್ಥಳಾಂತರಿಸಲು ಅನುಮೋದನೆ ನೀಡಲಾಗಿದೆ.

ಸದರಿ ಕಟ್ಟಡದಲ್ಲಿನ ಮೊದಲನೆಯ ಮತ್ತು ಎರಡನೇಯ ಮಹಡಿಗಳಲ್ಲಿನ ಫ್ಲಿಂತ್ ಏರಿಯಾ 3432.14 ಚದರ ಅಡಿಗಳಿಗೆ ಪ್ರತಿ ಚದರ ಅಡಿಗೆ ರೂ. 17.48/– ರಂತೆ ಲೋಕೋಪಯೋಗಿ ಇಲಾಖೆಯು ಕಾರ್ಯಪಾಲಕ ಇಂಜಿನಿಯರ್ ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರು ನಿಗಧಿಪಡಿಸಿರುವಂತೆ ಮಾಸಿಕ ರೂ. 60,000/–ಗಳನ್ನು ಪಾವತಿಸಲು ಅನುಮತಿ ನೀಡಲಾಗಿದೆ.

ಸದರಿ ಕಟ್ಟಡದ ಬಾಡಿಗೆಯ ಸಂಬಂಧ ತಗಲುವ ವೆಚ್ಚವನ್ನು ವಿದ್ಯುತ್ ಪರಿವೀಕ್ಷಣಾ ಇಲಾಖೆಯು ಪ್ರಸ್ತುತ ಸಾಲಿನಲ್ಲಿ ಲಭ್ಯವಿರುವ ಅನುದಾನದಲ್ಲಿ ಭರಿಸಿಕೊಂಡು 2010–11ನೇ ಸಾಲಿಗೆ ಆರ್ಥಿಕ ಇಲಾಖೆಗೆ ಸಕಾಲದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿ, ಸೂಕ್ತ ಅನುದಾನವನ್ನು ಒದಗಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.1996 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ ರವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2227

**ಸುಜಾತಮ್ಮ**

ಪೀಠಾಧಿಕಾರಿ, ಇಂಧನ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಸೈನಿಕ ಸನ್ಮಾನ ಗೌರವಧನ ಪರಿಯೋಜನೆ– ಸ್ವಾತಂತ್ರ್ಯ ಹೋರಾಟಗಾರರ ಶವ ಸಂಸ್ಕಾರಕ್ಕೆ ನೀಡಲಾಗುವ ಸಹಾಯ ಅನುದಾನವನ್ನು ಹೆಚ್ಚಿಸುವ ಬಗ್ಗೆ.

**ಪ್ರಸ್ತಾವನೆ:**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 1186 ಪಿಎಫ್‌ಎಸ್ 84(ಭಾ) ರ ದಿನಾಂಕ: 19.10.84 ರಲ್ಲಿ ಸ್ವಾತಂತ್ರ್ಯ ಹೋರಾಟಗಾರರು ಮರಣ ಹೊಂದಿನ ಸಂದರ್ಭದಲ್ಲಿ ಅವರುಗಳ ಕಳೇಬರದ ಅಂತ್ಯ ಸಂಸ್ಕಾರಕ್ಕೆ ರೂ.1,000.00 ಗಳನ್ನು ಸಹಾಯ ಅನುದಾನವಾಗಿ ಮಂಜೂರು ಮಾಡಲು ಆದೇಶಿಸಿದ್ದಿತು.

ಆದರೆ, ನಂತರದಲ್ಲಿ ಹಲವಾರು ಸ್ವಾತಂತ್ರ್ಯ ಯೋಧರ ಸಂಘ ಸಂಸ್ಥೆಗಳಿಂದ ಸದರಿ ಸಹಾಯ ಅನುದಾನವನ್ನು ಹೆಚ್ಚಿಸಲು ಹಲವಾರು ಮನವಿಗಳು ಬಂದ ಕಾರಣ ಸರ್ಕಾರವು ಈ ಪ್ರಸ್ತಾವನೆಗಳನ್ನು ಪುನರ್ ಪರಿಶೀಲಿಸಿತು. ಮೃತ ಸ್ವಾತಂತ್ರ್ಯ ಯೋಧರ ಶವ ಸಂಸ್ಕಾರಕ್ಕೆ ನೀಡಲಾಗುತ್ತಿದ್ದು ರೂ.1,000.00 ಗಳ ಸಹಾಯ ಅನುದಾನವನ್ನು ರೂ.2,000.00 ಗಳಿಗೆ ಹೆಚ್ಚಿಸಿ ಆದೇಶವನ್ನು ಹೊರಡಿಸಲು ತೀರ್ಮಾನಿಸಿ ಅದರ ಮೇರೆಗೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ಪಿಎಫ್‌ಜಿ 2008 ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ಹೇಳಿದ ಅಂಶಗಳ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಯೋಧರು ಮೃತ ಹೊಂದಿದ ಸಂದರ್ಭದಲ್ಲಿ ಕಳೇಬರದ ಅಂತ್ಯ ಸಂಸ್ಕಾರಕ್ಕಾಗಿ ಅವರ ಕುಟುಂಬ ವರ್ಗಕ್ಕೆ ನೀಡಲಾಗುತ್ತಿದ್ದ ರೂ. 1,000.00 ಗಳ ಸಹಾಯ ಅನುದಾನವನ್ನು ರೂ.2,000.00ಗಳಿಗೆ ಹೆಚ್ಚಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 1186 ಪಿಎಫ್‌ಎಸ್ 84 (ಭಾ) ರ ದಿನಾಂಕ: 19.10.84ರಲ್ಲಿ ಹೊರಡಿಸಲಾಗಿದ್ದ ಆದೇಶದಲ್ಲಿನ ಎಲ್ಲಾ ಷರತ್ತು ಮತ್ತು ನಿಬಂಧನೆಗಳು ಮುಂದುವರೆಯುತ್ತವೆ. ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಅದರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 980 ವೆಚ್ಚ –12/09ರ ದಿನಾಂಕ: 17.08.2009ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎಲ್.ಎಸ್. ಚಂದ್ರಶೇಖರ ರಾವ್**

ಪಿ.ಆರ್. 2232

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು–ರಾವಿವೇ 1)

## ಒಳಾಡಳಿತ ಸಚಿವಾಲಯ

**ವಿಷಯ:** ಬೀದರ್‌ನ ಎರಡನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರ ಹಾಗೂ ಅವರ ಕಚೇರಿಯ ಪೂರಕ ಸಿಬ್ಬಂದಿಯ ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸ:ಲಾ 47 ಎಲ್‌ಸಿಇ 2004, ದಿನಾಂಕ: 23.06.2005

2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ: ಡಿಪಿಎನ್/ಸಿಶಾ1/155/2008–09, ದಿನಾಂಕ: 24.02.2009

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಬೀದರ್‌ನ ಎರಡನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯವು ಸೃಜನೆಯಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಅದೇಶದನ್ವಯ ಬೀದರ್‌ನ ಎರಡನೇ ಹೆಚ್ಚುವರಿ ಸಿವಿಲ್

ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಲಯವು ಸ್ಥಾಪನೆಯಾಗಿದೆ. ಸದರಿ ನ್ಯಾಯಾಲಯದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಪ್ರಕರಣಗಳನ್ನು ನಡೆಸಲು, ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಅಭಿಯೋಗ ಇಲಾಖೆಗೆ ಒಂದು ಸಹಾಯಕ ಸರ್ಕಾರಿ ಅಭಿಯೋಜಕರು–ವ.–ಸಹಾಯಕ ಸರ್ಕಾರಿ ವಕೀಲರ ಹಾಗೂ ಒಂದು ಬೆರಳಚ್ಚುಗಾರರ ಮತ್ತು ಒಂದು ದಲಾಯತ್‌ರ ಹುದ್ದೆಗಳನ್ನು ಸೃಜನೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 123 ಪಿಪಿಇ 2009 ಬೆಂಗಳೂರು, ದಿನಾಂಕ: 25ನೇ ಸೆಪ್ಟಂಬರ್ 2009**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಬೀದರ್‌ನ ಎರಡನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರ ಕಚೇರಿಗೆ ಈ ಕೆಳಕಂಡ ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು | ಸೃಜಿಸಲಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರು | 01 |
| 2 | ಬೆರಳಚ್ಚುಗಾರ | 01 |
| 3 | ದಲಾಯತ್ | 01 |

ಸದರಿ ಹುದ್ದೆಗಳನ್ನು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಭರ್ತಿ ಮಾಡತಕ್ಕದ್ದು.

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ '2014 ನ್ಯಾಯಾಪರಿಪಾಲನೆ –00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರನ್ವಯ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 690 ವೆಚ್ಚ–11/2009 ದಿನಾಂಕ: 16.09.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 2237                    ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಖಲೀಲ್ ರೆಹಮಾನ್, ಅಂದಿನ ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಗದಗ್ (ಹಾಲಿ ಅಮಾನತ್ತಿನಲ್ಲಿರುವ ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಚಿತ್ರದುರ್ಗ) ಇವರ ಅಮಾನತ್ತನ್ನು ವಿಚಾರಣೆ ಬಾಕಿ ಇಟ್ಟು ತೆರವುಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ 21 ಇಎನ್‌ಕ್ಯೂ 04, ದಿ.19–11–04
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ ಇವರ ಪತ್ರ ಸಂಖ್ಯೆ: ಜಿಪಂಗ/ಸಿಬ್ಬಂದಿ/ಇವಿ/ಜಿ.ಬಿ.ನಂದಿ/ ವಹಿ–102/03–04, ದಿ.06–01–2009.
3. ಶ್ರೀ ಬಿ.ಎಲ್.ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಮತ್ತು ವಿಚಾರಣಾಧಿಕಾರಿ ಇವರ ದಿನಾಂಕ: 24.04.2006ರ ಪತ್ರ.
4. ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ 21 ಇಎನ್‌ಕ್ಯೂ 04, ದಿ.18–04–09
5. ಶ್ರೀ ಹೆಚ್.ಖಲೀಲ್ ರೆಹಮಾನ್, ಮುಖ್ಯ ಲೆಕ್ಕಾಧಿಕಾರಿ ಇವರ ಮನವಿ ದಿನಾಂಕ 1–06–2009

**ಪ್ರಸ್ತಾವನೆ:**

ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಮುಂಡರಗಿ ಇಲ್ಲಿ ಉಗ್ರಾಣ ಸಾಮಾಗ್ರಿಗಳ ಕೊರತೆಗೆ ಕಾರಣರಾದರೆಂಬ ಆರೋಪಗಳಿಗೆ ಸಂಬಂಧಿಸಿದಂತೆ ಶ್ರೀ ಜಿ.ಬಿ.ನಂದಿ, ಕಿರಿಯ ಇಂಜಿನಿಯರ್ ಮತ್ತು ಶ್ರೀ ಎಂ.ವಿ.ರಾಜಶೇಖರ, ಸಹಾಯಕ ಇಂಜಿನಿಯರ್ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಬಿ.ಎಲ್.ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸುವ ಜೊತೆಗೆ ಆ ಸಂದರ್ಭದಲ್ಲಿ ಜಿಲ್ಲಾ ಪಂಚಾಯಿತಿ, ಗದಗ ಜಿಲ್ಲೆ ಇಲ್ಲಿ ಮುಖ್ಯ

ಲೆಕ್ಕಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಹೆಚ್.ಖಲೀಲ್ ರೆಹಮಾನ್ ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್,ಗದಗ ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಶ್ರೀ ಜಿ.ಬಿ.ನಂದಿ, ಕಿರಿಯ ಇಂಜಿನಿಯರ್ ಮತ್ತು ಶ್ರೀ ಎಂ.ವಿ.ರಾಜಶೇಖರ, ಸಹಾಯಕ ಇಂಜಿನಿಯರ್ ಇವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯಲ್ಲಿ ಮಂಡನಾಧಿಕಾರಿಗಳ ನಿರ್ಲಕ್ಷತನದಿಂದಾಗಿ ಸರ್ಕಾರಕ್ಕೆ ಪ್ರತಿಕೂಲ ವರದಿ ಬಂದಿದೆ ಎಂಬ ಅಂಶವನ್ನು ಪ್ರಸ್ತಾಪಿಸಿ, ಇವರ ವಿರುದ್ಧ ಸೂಕ್ತ ಕ್ರಮ ಜರುಗಿಸುವಂತೆ ಕೋರಿದ್ದರು. ಜೊತೆಗೆ ಇಲಾಖಾ ವಿಚಾರಣಾಧಿಕಾರಿಯವರೂ ಕೂಡ ಮೇಲೆ (3)ರಲ್ಲಿ ಓದಲಾದ ತಮ್ಮ ದಿನಾಂಕ: 24–04–2006ರ ಅವರ ಪತ್ರದಲ್ಲಿ ಮಂಡನಾಧಿಕಾರಿಯಾಗಿದ್ದ ಶ್ರೀ ಹೆಚ್.ಖಲೀಲ್ ರೆಹಮಾನ್‌ರವರು ಇಲಾಖಾ ವಿಚಾರಣೆಯ ಸಂದರ್ಭದಲ್ಲಿ ಸಹಕಾರ ನೀಡದ ಬಗ್ಗೆ ಸರ್ಕಾರಕ್ಕೆ ವರದಿ ಮಾಡಿದ್ದರು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ ಹಾಗೂ ವಿಚಾರಣಾಧಿಕಾರಿಯವರ ವರದಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಮೇಲೆ (4) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಹೆಚ್.ಕಲೀಲ್ ರೆಹಮಾನ್, ಅಂದಿನ ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಗದಗ್ ಇವರನ್ನು ವಿಚಾರಣೆ ಬಾಕಿ ಇಟ್ಟು ಅಮಾನತ್ತುಗೊಳಿಸಿತ್ತು.

ಮೇಲೆ (5) ರಲ್ಲಿ ಓದಲಾದ ಮನವಿ ಪತ್ರದಲ್ಲಿ ಶ್ರೀ ಹೆಚ್.ಕಲೀಲ್ ರೆಹಮಾನ್, ಮುಖ್ಯ ಲೆಕ್ಕಾಧಿಕಾರಿ (ಅಮಾನತ್ತಿನಲ್ಲಿರುವ) ಇವರು ತಾವು ಪ್ರಕರಣದಲ್ಲಿ ಯಾವುದೇ ಕರ್ತವ್ಯ ಲೋಪವೆಸಗಿರುವುದಿಲ್ಲವೆಂದು ತಿಳಿಸುತ್ತಾ, ತಮ್ಮ ಅಮಾನತ್ತನ್ನು ತೆರವುಗೊಳಿಸಿ, ಸೇವೆಯಲ್ಲಿ ಪುನರ್ ನೇಮಕ ಮಾಡಲು ಕೋರಿರುತ್ತಾರೆ.

ಸರ್ಕಾರವು ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಹೆಚ್.ಕಲೀಲ್ ರೆಹಮಾನ್ ಮುಖ್ಯ ಲೆಕ್ಕಾಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇಟ್ಟು ಅಮಾನತ್ತನ್ನು ತೆರವುಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ,

**ಆದೇಶ ಸಂಖ್ಯೆ: ಗ್ರಾಅಪ 81 ಜಿಪಅ 2009, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ 10ನೇ ನಿಯಮ, (5) ನೇ ಉಪನಿಯಮ, ಖಂಡ (ಸಿ) ಪ್ರಕಾರ ಶ್ರೀ ಹೆಚ್.ಖಲೀಲ್ ರೆಹಮಾನ್, ಮುಖ್ಯ ಲೆಕ್ಕಾಧಿಕಾರಿ, ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಸದರಿಯವರನ್ನು ಜಿಲ್ಲಾ ಪಂಚಾಯತ್, ಚಿತ್ರದುರ್ಗ ಇಲ್ಲಿನ ಮುಖ್ಯ ಲೆಕ್ಕಾಧಿಕಾರಿ ಹುದ್ದೆಯಲ್ಲಿ ಪುನರ್ ಸ್ಥಾಪಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ವೈ. ಸಾಗರ**

ಪಿ.ಆರ್. 2240

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿನ ಎರಡು ಜಂಟಿ ನಿರ್ದೇಶಕರ ಹುದ್ದೆಗಳಲ್ಲಿನ ಒಂದು ಹುದ್ದೆಯನ್ನು ಜಂಟಿ ನಿರ್ದೇಶಕರು (ಆಯುಷ್ ವೈದ್ಯಕೀಯ ಶಿಕ್ಷಣ) ಎಂದು ಪದನಾಮೀಕರಿಸಿ ಆಯುಷ್ ನಿರ್ದೇಶಕರ ವ್ಯಾಪ್ತಿಯಲ್ಲಿ ಒಳಪಡಿಸುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯದಲ್ಲಿರುವ ಮೆಡಿಕಲ್/ಡೆಂಟಲ್/ಫಾರ್ಮಸಿ/ಫಿಜಿಯೋಥೆರಪಿ ಹಾಗೂ ನರ್ಸಿಂಗ್ ಸಂಸ್ಥೆಗಳನ್ನು ಆಡಳಿತಾತ್ಮಕವಾಗಿ ನಿಯಂತ್ರಣದಲ್ಲಿಡಲು ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯವನ್ನು ಸ್ಥಾಪಿಸಲಾಗಿದೆ ಮತ್ತು ಇದು ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿದೆ. ಇದೇ ರೀತಿ ಆಯುರ್ವೇದ, ಹೋಮಿಯೋಪತಿ, ಯುನಾನಿ, ನ್ಯಾಚುರೋಪತಿ ಕಾರ್ಯಗಳನ್ನು ನಡೆಸುತ್ತಿರುವ ಸಂಸ್ಥೆಗಳನ್ನು ಆಡಳಿತಾತ್ಮಕವಾಗಿ ನಿಯಂತ್ರಿಸಲು ಆಯುಷ್ ನಿರ್ದೇಶನಾಲಯಕ್ಕೆ ವಹಿಸಲಾಗಿದೆ. ಆಯುಷ್ ನಿರ್ದೇಶನಾಯಲವು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಒಂದು ವಿಭಾಗವಾಗಿರುತ್ತದೆ. ಈ ವಿಭಾಗಕ್ಕೆ ರಾಜ್ಯದ ಆಸ್ಪತ್ರೆಗಳ ಕೆಲಸವು ಹೆಚ್ಚಾಗಿರುತ್ತದೆ. ರಾಜ್ಯದಲ್ಲಿ 57 ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯಗಳು, 4 ಯುನಾನಿ ಕಾಲೇಜುಗಳು, 12 ಹೋಮಿಯೋಪತಿ ಕಾಲೇಜುಗಳು ಮತ್ತು 4 ನ್ಯಾಚುರೋಪತಿ ಹಾಗೂ ಯೋಗ ಮಹಾವಿದ್ಯಾಲಯಗಳು ಹಾಲಿ ಕಾರ್ಯನಿರ್ವಹಿಸುತ್ತಿವೆ. ಜೊತೆಗೆ ಈಗಿರುವ ಸ್ನಾತಕ ಪೂರ್ವ ಹಾಗೂ ಸ್ನಾತಕೋತ್ತರ ಕೋರ್ಸ್‌ಗಳ ಸಂಖ್ಯೆ ಮತ್ತು ಗುಣಮಟ್ಟ ಅಭಿವೃದ್ಧಿಪಡಿಸುವ ಅಗತ್ಯವಿದೆ. ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದಲ್ಲಿ ಹಾಲಿ ಎರಡು ಜಂಟಿ ನಿರ್ದೇಶಕರ ಹುದ್ದೆಗಳಿಗೆ ಅದರಲ್ಲಿನ ಒಂದು ಹುದ್ದೆಯನ್ನು ಜಂಟಿ ನಿರ್ದೇಶಕರು (ಆಯುಷ್ ವೈದ್ಯಕೀಯ ಶಿಕ್ಷಣ) ಎಂದು

ಮರುಪದನಾಮಗೊಳಿಸಿ ನಿರ್ದೇಶಕರು, ಆಯುಷ್ ಇವರ ವ್ಯಾಪ್ತಿಗೊಳಪಡಿಸಿ ಆಯುಷ್ ಇಲಾಖೆಯಲ್ಲಿನ ವೈದ್ಯಕೀಯ ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳನ್ನು ನಿರ್ವಹಿಸುವುದು ಅವಶ್ಯಕತೆಯಿದೆ. ಈ ಹಿನ್ನೆಲೆಯಲ್ಲಿ ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿನ ಜಂಟಿ ನಿರ್ದೇಶಕರ ಒಂದು ಹುದ್ದೆಯನ್ನು ಆಯುಷ್ ಇಲಾಖೆಗೆ ಸ್ಥಳಾಂತರಿಸಿ ಸದರಿ ಜಂಟಿ ನಿರ್ದೇಶಕರ ಹುದ್ದೆಯನ್ನು ನಿರ್ದೇಶಕರು, ಆಯುಷ್ ಇವರ ಅಧೀನದಲ್ಲಿ ಕಾರ್ಯನಿರ್ವಹಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 251 ಪಿಟಿಡಿ 2008 ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ನಿರ್ದೇಶನಾಲಯದಲ್ಲಿನ ಎರಡು ಜಂಟಿ ನಿರ್ದೇಶಕರ ಹುದ್ದೆಗಳಲ್ಲಿನ ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ಜಂಟಿ ನಿರ್ದೇಶಕರು (ಆಯುಷ್ ವೈದ್ಯಕೀಯ ಶಿಕ್ಷಣ) ಎಂದು ಪದನಾಮೀಕರಿಸಿ ಸದರಿ ಹುದ್ದೆಯನ್ನು ಆಯುಷ್ ನಿರ್ದೇಶನಾಲಯ ನಿರ್ದೇಶಕರ ಅಧಿಕಾರ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸಲು ಸ್ಥಳಾಂತರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ1 ಟಿ.ಎಫ್.ಪಿ. 96 ದಿ:10–7–96 ರಲ್ಲಿನ ಐಟಂ 53ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 2242

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ವಿಷಯ:** 2009–10 ನೇ ಸಾಲಿನಲ್ಲಿ ರಾಜ್ಯದಲ್ಲಿನ 07 ಅನುದಾನ ರಹಿತ ಆಯುರ್ವೇದ ಮಹಾವಿದ್ಯಾಲಯಗಳಿಗೆ ಪದವಿ ಕೋರ್ಸ್‌ಗಳ ಪ್ರವೇಶಕ್ಕೆ ಸೀಟ್ ಮ್ಯಾಟ್ರಿಕ್ ನಿಗದಿಗೊಳಿಸಿರುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 142 ಪಿಟಿಡಿ 2009, ದಿನಾಂಕ: 11–08–2009.

2) ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/16/ ಅಭಿವೃದ್ಧಿ (2) 2009–10, ದಿನಾಂಕ:17–08–2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ರಲ್ಲಿನ ಸರ್ಕಾರದ ಆದೇಶದಲ್ಲಿ, 2009–10 ನೇ ಸಾಲಿಗೆ ಐ.ಎಂ.ಸಿ.ಸಿ. ಆಕ್ಟ್ (amendment) 2003 ಸೆಕ್ಷನ್ 13(ಸಿ) ಅನ್ವಯ ಮಾನ್ಯತೆ ಹೊಂದಿರುವ ಕೆ.ವಿ.ಜಿ. ಆಯುರ್ವೇದ ಮಹಾವಿದ್ಯಾಲಯ, ಸುಳ್ಯ ಹಾಗೂ ಹಿಂಗುಲಾಂಬಿಕಾ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಗುಲ್ಬರ್ಗಾ ಕಾಲೇಜುಗಳಲ್ಲಿನ ಹಾಗೂ ಐ.ಎಂ.ಸಿ.ಸಿ. ಆಕ್ಟ್ (amendment) 2003 ಸೆಕ್ಷನ್ 13(ಎ) ಅನ್ವಯ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರು ಅನುಮತಿ ನೀಡಿರುವ 05 ಅನುದಾನ ರಹಿತ ಮಹಾವಿದ್ಯಾಲಯಗಳಲ್ಲಿನ ಪದವಿ ಕೋರ್ಸ್‌ಗಳಿಗೆ ಸೀಟುಗಳನ್ನು ಹಂಚಿಕೆ ಮಾಡಿ ಅನುಬಂಧ–1 ರಲ್ಲಿ ಸೀಟ್ ಮ್ಯಾಟ್ರಿಕ್ಸ್‌ನ್ನು ನಿಗದಿಪಡಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ (2) ರಲ್ಲಿನ ಪತ್ರದಲ್ಲಿ, ಸೆಂಟ್ರಲ್ ಕೌನ್ಸಿಲ್ ಆಫ್ ಇಂಡಿಯನ್ ಮೆಡಿಸಿನ್, ನವದೆಹಲಿ ಇವರು ರಾಜ್ಯದಲ್ಲಿ ಆಯುರ್ವೇದ ಕಾಲೇಜುಗಳು ಸಿ.ಸಿ.ಐ.ಎಂ ಕಾಯ್ದೆಯ ಕಲಂ 13(ಎ) ರನ್ವಯ ಅನುಮತಿ ಪಡೆದಿರುವ ಕಾಲೇಜುಗಳಲ್ಲಿ ಸರಿಯಾದ ಮೂಲ ಸೌಲಭ್ಯಗಳು ಇಲ್ಲದೇ ಇರುವುದರಿಂದ, ಅಂತಹ ಆಯುರ್ವೇದ ಕಾಲೇಜುಗಳಿಗೆ ಕೌನ್ಸಿಲಿಂಗ್‌ನ್ನು ಮಾಡದಂತೆ ಮತ್ತು ಸದರಿ ಕೌನ್ಸೆಲಿಂಗ್‌ನ್ನು ಭಾರತ ಸರ್ಕಾರದಿಂದ ಅಂತಿಮ ತೀರ್ಮಾನ ಬರುವವರೆಗೆ ಮುಂದೂಡುವಂತೆ ತಿಳಿಸಿರುವ ಹಿನ್ನೆಲೆಯಲ್ಲಿ ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರು ಸರ್ಕಾರದ ಆದೇಶ ಸಂಖ್ಯೆ: ಆಕುಕ 142 ಪಿಟಿಡಿ 2009, ದಿನಾಂಕ: 11–08–2009 ರಲ್ಲಿ ಸೀಟ್ ಮ್ಯಾಟ್ರಿಕ್ಸ್ ಹಂಚಿಕೆ ಮಾಡಲಾದ ಈ ಕೆಳಕಂಡ ಕಾಲೇಜುಗಳ ಸೀಟ್ ಮ್ಯಾಟ್ರಿಕ್ಸ್ ಆದೇಶವನ್ನು ತಡೆ ಹಿಡಿದು, ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ತಿಳಿಸಲು ಕೋರಿರುತ್ತಾರೆ.

1. ಶ್ರೀ ಶ್ರೀ ಕಾಲೇಜ್ ಆಫ್ ಆಯುರ್ವೇದಿಕ್ ಸೈನ್ಸ್ ಅಂಡ್ ರಿಸರ್ಚ್ ಸೆಂಟರ್, ಬೆಂಗಳೂರು.
2. ಸಿ.ಬಿ.ಗುತ್ತಲ್ ಆಯುರ್ವೇದ ಮೆಡಿಕಲ್ ಕಾಲೇಜ್. ಧಾರವಾಡ
3. ಆತ್ರೇಯ ಆಯುರ್ವೇದ ಮೆಡಿಕಲ್ ಕಾಲೇಜ್, ಕೊಡಿಗೇಹಳ್ಳಿ, ದೊಡ್ಡಬಳ್ಳಾಪುರ, ಬೆಂಗಳೂರು.
4. ಅಶ್ವಿನಿ ಆಯುರ್ವೇದಿಕ್ ಮೆಡಿಕಲ್ ಕಾಲೇಜ್, ತುಮಕೂರು.
5. ಶ್ರೀ ರಾಘವೇಂದ್ರ ಆಯುರ್ವೇದ ಮೆಡಿಕಲ್ ಕಾಲೇಜ್, ಮಲ್ಲಾಡಿಹಳ್ಳಿ, ಚಿತ್ರದುರ್ಗ, ಜಿಲ್ಲೆ.

ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರ ಶಿಫಾರಸ್ಸಿನಂತೆ ಮೇಲಿನ 5 ಆಯುರ್ವೇದ ಮೆಡಿಕಲ್ ಕಾಲೇಜುಗಳ ಸೀಟ್ ಮ್ಯಾಟ್ರಿಕ್ಸ್‌ನ್ನು ಭಾರತ ಸರ್ಕಾರದ ಆದೇಶ ಬರುವ ತನಕ ತಡೆ ಹಿಡಿಯಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 142 ಪಿಟಿಡಿ 2009, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸೆಂಟ್ರಲ್ ಕೌನ್ಸಿಲ್ ಆಫ್ ಇಂಡಿಯನ್ ಮೆಡಿಸಿನ್, ನವದೆಹಲಿ ಇವರು ರಾಜ್ಯದಲ್ಲಿ ಆಯುರ್ವೇದ ಕಾಲೇಜುಗಳು ಸಿ.ಸಿ.ಐ.ಎಂ. ಕಾಯ್ದೆಯ ಕಲಂ 13(ಎ) ರನ್ವಯ ಅನುಮತಿ ಪಡೆದಿರುವ ಈ ಕೆಳಕಂಡ ಕಾಲೇಜುಗಳಿಗೆ ಹಂಚಿಕೆ ಮಾಡಲಾದ ಸೀಟ್ ಮ್ಯಾಟ್ರಿಕ್ಸ್‌ನ್ನು ಆದೇಶ ಸಂಖ್ಯೆ:ಆಕುಕ 142 ಪಿಟಿಡಿ 2009, ದಿನಾಂಕ: 11–08–2009 ರಲ್ಲಿ ಪ್ರಕಟಿಸಿದ್ದು, ಅದನ್ನು ಭಾರತ ಸರ್ಕಾರದ ಆದೇಶ ಬರುವ ತನಕ ತಡೆ ಹಿಡಿಯಲಾಗಿದೆ.

1. ಶ್ರೀ ಶ್ರೀ ಕಾಲೇಜ್ ಆಫ್ ಆಯುರ್ವೇದಿಕ್ ಸೈನ್ಸ್ ಅಂಡ್ ರಿಸರ್ಚ್ ಸೆಂಟರ್, ಬೆಂಗಳೂರು.
2. ಸಿ.ಬಿ.ಗುತ್ತಲ್ ಆಯುರ್ವೇದ ಮೆಡಿಕಲ್ ಕಾಲೇಜ್, ಧಾರವಾಡ.
3. ಆತ್ರೇಯ ಆಯುರ್ವೇದ ಮೆಡಿಕಲ್ ಕಾಲೇಜ್, ಕೊಡಿಗೇಹಳ್ಳಿ, ದೊಡ್ಡಬಳ್ಳಾಪುರ, ಬೆಂಗಳೂರು.
4. ಅಶ್ವಿನಿ ಆಯುರ್ವೇದಿಕ್ ಮೆಡಿಕಲ್ ಕಾಲೇಜ್, ತುಮಕೂರು.
5. ಶ್ರೀ ರಾಘವೇಂದ್ರ ಆಯುರ್ವೇದ ಮೆಡಿಕಲ್ ಕಾಲೇಜ್, ಮಲ್ಲಾಡಿಹಳ್ಳಿ, ಚಿತ್ರದುರ್ಗ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 2243

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್.ಇಂಧುದರ್ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು– ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ: ಸಿಆಸುಇ 316 ಕೆಇವಿ 07 ದಿ: 05.11.2007
2. ವಿಚಾರಣಾಧಿಕಾರಿರವರ ವರದಿ ದಿ:07–11–08
3. ವಿಚಾರಣಾಧಿಕಾರಿರವರ ಮನವಿ ದಿ:07–11–08

**ಪ್ರಸ್ತಾವನೆ:**

ಮೇಲೆ ಕ್ರ. ಸಂ. (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಬಿ.ಬಿ.ಹಿರೇಮಣಿಯವರ್ ಕೆ.ಎ.ಎಸ್. ರವರನ್ನು ಸರ್ಕಾರಿ ಅಧಿಸೂಚನೆ ಸಂಃ ಸಿಆಸುಇ 106 ಆಸೇವ 06 ದಿ:08–06–06ರಲ್ಲಿ ವಿಶೇಷ ಜಿಲ್ಲಾಧಿಕಾರಿ (ಭೂಸ್ವಾಧೀನ) ಇಂಡಿಯನ್ ಆಯಿಲ್ ಕಾರ್ಪೋರೇಷನ್, ನಿಯಮಿತ, ಬೆಂಗಳೂರು ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದ್ದರೂ ಸಹ ಅವರು ಸದರಿ ಹುದ್ದೆಗೆ ಹಾಜರಾಗದೇ ಸರ್ಕಾರದ ಆದೇಶವನ್ನು ಉಲ್ಲಂಘಿಸಿರುವ ಆರೋಪಕ್ಕೆ ಸಂಬಂಧಿಸಿದಂತೆ. ಅವರ ವಿರುದ್ಧ ಹೊರಿಸಲಾದ ಆರೋಪದ ಕುರಿತು ಇಲಾಖಾ ವಿಚಾರಣೆ ನಡೆಸಲು ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್.ಇಂಧುಧರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ: (2) ರಲ್ಲಿ ಓದಲಾದ ದಿ:07–11–08 ರಲ್ಲಿ ವಿಚಾರಣೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿರುವ ಸಂಬಂಧ ಗೌರವಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶ:

**ಸರ್ಕಾರಿ ಆದೇಶ ಸಂ: ಸಿಆಸುಇ 340 ಎಸ್‌ಇಎನ್ 06 (ಸಿಆಸುಇ 316 ಕೆಇವಿ 07) ಬೆಂಗಳೂರು,**
**ದಿನಾಂಕ: 15ನೇ ಸೆಪ್ಟಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಎಸ್.ಇಂಧುದರ್ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರಿಗೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂ:ಸಿಅಸುಇ 16ಸೇಇವಿ 05 ದಿ:23–08–05 ರನ್ವಯ ರೂ.6000.00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಃಸಿಅಸುಇ 45 ಸೇಇವಿ 01 ದಿ: 04–03–02 ರನ್ವಯ ರೂ.1000.00 (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಅಯವ್ಯಯ ಲೆಕ್ಕ ಶೀರ್ಷಿಕೆ 2052 ಸಚಿವಾಲಯ ಸಾಮಾನ್ಯ ಸೇವೆಗಳು–090–ಸಚಿವಾಲಯ–01, ಕರ್ನಾಟಕ ಸರ್ಕಾರ ಸಚಿವಾಲಯ–051 ಸಾಮಾನ್ಯ ವೆಚ್ಚಗಳು ರಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್. 2247

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಶ್ರೀ ಎಂ ಮಲ್ಲಯ್ಯ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು ಪಶ್ಚಿಮ ವಲಯ ಇವರ ವಿರುದ್ದ ಜಂಟೀ ಇಲಾಖಾ ವಿಚಾರಣೆ–ಅಂತಿಮ ಆದೇಶ.

**ಓದಲಾಗಿದೆ:** 1) ದಿನಾಂಕ: 08–12–99ರ ಆದೇಶ ಸಂಖ್ಯೆ: ಸಿಆಸುಇ 076 ಎಸ್‌ಇಎನ್ 97
2) ದಿನಾಂಕ: 06–12–2000ರ ಆದೇಶ ಸಂಖ್ಯೆ : ಅನಾಸ 155 ಇಎಫ್‌ಟಿ 97
3) ದಿನಾಂಕ: 14–05–07ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಅನಾಸ 155 ಇಎಫ್‌ಟಿ 97
4) ದಿನಾಂಕ: 03–08–09ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಅನಾಸ 155 ಇಎಫ್‌ಟಿ 97

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಶ್ರೀ ಎಂ.ಮಲ್ಲಯ್ಯ, ಕೆಎಎಸ್ (ಕಿರಿಯ ಶ್ರೇಣಿ) ಇವರು ಉಪನಿರ್ದೇಶಕರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು, ಪಶ್ಚಿಮ ವಲಯ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ 1997ರ ಅವಧಿಯಲ್ಲಿ ಸದರಿ ವಲಯದ ಸೀಮೆಎಣ್ಣೆ ಕೂಪನುಗಳ ಮುದ್ರಣ, ಹಂಚಿಕೆಯಲ್ಲಿ ಅವ್ಯವಹಾರ ಎಸಗಿದ್ದರೆನ್ನಲಾದ ಆಪಾದನೆಯ ಮೇಲೆ ಇವರು ಹಾಗೂ ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಎಂಟು ನೌಕರರ ವಿರುದ್ಧ ಜಂಟೀ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿದ್ದು, ಈ ಶಿಸ್ತು ಕ್ರಮಕ್ಕೆ ಸರ್ಕಾರದ ಕಾರ್ಯದರ್ಶಿ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆರವರನ್ನು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸುವಂತೆ ಮತ್ತು ಶ್ರೀ ಮಲ್ಲಯ್ಯರವರಿಗೆ ದಂಡನೆ ವಿಧಿಸಬೇಕೆಂಬ ಅಭಿಪ್ರಾಯಕ್ಕೆ ಬಂದಲ್ಲಿ ಪ್ರಸ್ತಾವನೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸುವಂತೆ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಶ್ರೀ ಎಂ.ಮಲ್ಲಯ್ಯ ಕೆಎಎಸ್ (ಕಿರಿಯ ಶ್ರೇಣಿ) ಅಂದಿನ ಉಪ ನಿರ್ದೇಶಕರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಪಶ್ಚಿಮ ವಲಯ ಹಾಗೂ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಎಂಟು ಜನ ನೌಕರರ ವಿರುದ್ಧ ಜಂಟೀ ಇಲಾಖಾ ವಿಚಾರಣೆ ಮುಂದುವರಿಸಿ, ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರನ್ನು ವಿಚಾರಣಾಧಿಕಾರಿಯಾಗಿ ಮತ್ತು ಜಂಟೀ ನಿರ್ದೇಶಕರು (ಸಂಗ್ರಹಣೆ ಮತ್ತು ವಿತರಣೆ) ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯಾಗಿ ನೇಮಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿದ ದಿನಾಂಕ: 10–01–07 ರ ವಿಚಾರಣಾ ವರದಿಯ ಪ್ರತಿಯನ್ನು ಲಗತ್ತಿಸುತ್ತಾ ವಿಚಾರಣಾ ವರದಿಯನ್ನು ಅಂಗೀಕರಿಸಲಾಗಿದ್ದು, ಅದರಂತೆ, ಶ್ರೀ ಮಲ್ಲಯ್ಯ ಕೆಎಎಸ್‌ರವರಿಗೆ ಒಂದು ಆಡಳಿತಾತ್ಮಕ ಎಚ್ಚರಿಕೆ ನೀಡುವಂತೆ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯು ಪ್ರಸ್ತಾವನೆ ಸಲ್ಲಿಸಿದೆ. ವಿಚಾರಣಾ ವರದಿಯನ್ನು ಅವಲೋಕಿಸಲಾಗಿ, ಶ್ರೀ ಮಲ್ಲಯ್ಯರವರ ವಿರುದ್ಧದ ಆಪಾದನೆಗಳು ರುಜುವಾತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳ ಅಭಿಪ್ರಾಯವಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿನ ಅನಧಿಕೃತ ಟಿಪ್ಪಣಿಗೆ ಲಗತ್ತಿಸಿದ ದಿನಾಂಕ: 01–08–09ರ ಆದೇಶ ಸಂಖ್ಯೆ: ಆನಾಸ 155 ಎಎಫ್‌ಟಿ 97ರಲ್ಲಿ ಆರೋಪ ಸಾಬೀತಾದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖಾ ನೌಕರರಾದ ಎಂಟು ಜನ ನೌಕರರ ವಿರುದ್ಧ ದಂಡನೆಯನ್ನು ವಿಧಿಸಲಾಗಿದೆ.

ಶ್ರೀ ಎಂ ಮಲ್ಲಯ್ಯ, ಕೆಎಎಸ್ (ಕಿರಿಯ ಶ್ರೇಣಿ) ಇವರ ವಿರುದ್ಧದ ಆರೋಪಗಳು ವಿಚಾರಣಾ ವರದಿಯಲ್ಲಿ ಸಾಬೀತಾಗದ ಕಾರಣ, ವಿಚಾರಣಾ ವರದಿಯನ್ನು ಅಂಗೀಕರಿಸಲಾಗಿದ್ದು, ಅದರಂತೆ, ಇವರಿಗೆ ಆಡಳಿತಾತ್ಮಕ ಎಚ್ಚರಿಕೆ ನೀಡಿ ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ಕೋರಿರುವ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 011 ಕೆಇವಿ 07 ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಶ್ರೀ ಎಂ.ಮಲ್ಲಯ್ಯ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ಉಪನಿರ್ದೇಶಕರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಪಶ್ಚಿಮ ವಲಯ, ಬೆಂಗಳೂರು ಇವರು ಇನ್ನು ಮುಂದೆ ಸರ್ಕಾರಿ ಕೆಲಸದ ಕಾರ್ಯನಿರ್ವಹಣೆಯಲ್ಲಿ ಹೆಚ್ಚಿನ ಜಾಗರೂಕತೆಯಿಂದ ಕರ್ತವ್ಯ ನಿರ್ವಹಿಸುವಂತೆ ಎಚ್ಚರಿಕೆ ನೀಡುತ್ತಾ, ಇವರನ್ನು ಪ್ರಸ್ತಾವನೆಯಲ್ಲಿ ವಿವರಿಸಿದ ಆಪಾದನೆಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದಾರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

ಪಿ.ಆರ್. 2248

**ಕಂದಾಯ ಸಚಿವಾಲಯ**

**ವಿಷಯ:** 2009–10ನೇ ಸಾಲಿನಲ್ಲಿ ಬರಪೀಡಿತವೆಂದು ಘೋಷಿಸಿರುವ ತಾಲ್ಲೂಕುಗಳಲ್ಲಿ ಬರ ಪರಿಹಾರ ಕಾರ್ಯಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 167 ಟಿಎನ್‌ಆರ್ 2009 ದಿನಾಂಕ: 11–08–2009

2) ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್‌ಆರ್ 2009 ದಿನಾಂಕ: 27–08–2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಆದೇಶದಲ್ಲಿ 2009–10ನೇ ಸಾಲಿನಲ್ಲಿ ರಾಜ್ಯದ 20 ಜಿಲ್ಲೆಗಳ 86 ತಾಲ್ಲೂಕುಗಳನ್ನು ಬರಪೀಡಿತವೆಂದು ಘೋಷಿಸಲಾಗಿದೆ. ಈ ಬರಪೀಡಿತ ತಾಲ್ಲೂಕುಗಳಲ್ಲಿ ತುರ್ತು ಬರ ಪರಿಹಾರ ಕಾರ್ಯಗಳನ್ನು ಕೈಗೊಳ್ಳುವ ಅವಶ್ಯಕತೆ ಇದ್ದು, ಮೊದಲ ಹಂತದಲ್ಲಿ ಗುಲ್ಬರ್ಗಾ ವಿಭಾಗದಡಿಯಲ್ಲಿ ಬರುವ ಬರಪೀಡಿತ 30 ತಾಲ್ಲೂಕುಗಳಿಗೆ ಹಾಗೂ ಬೆಳಗಾಂ ವಿಭಾಗದಡಿಯಲ್ಲಿ ಬರುವ 15 ತಾಲ್ಲೂಕುಗಳಿಗೆ ಪ್ರತಿ ತಾಲೂಕಿಗೆ ರೂ.1 ಕೋಟಿಯಂತೆ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

ಎರಡನೇ ಹಂತದಲ್ಲಿ ಬೆಂಗಳೂರು ವಿಭಾಗದಡಿಯಲ್ಲಿ ಬರುವ ಬರಪೀಡಿತ 30 ತಾಲ್ಲೂಕುಗಳಿಗೆ ಹಾಗೂ ಮೈಸೂರು ವಿಭಾಗದಡಿಯಲ್ಲಿ ಬರುವ 11 ತಾಲ್ಲೂಕುಗಳಿಗೆ ಪ್ರತಿ ತಾಲ್ಲೂಕಿಗೆ ರೂ.1 ಕೋಟಿಯಂತೆ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್‌ಆರ್ 2009 ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ವಿಭಾಗದಲ್ಲಿ ಬರಪೀಡಿತವೆಂದು ಘೋಷಿಸಿರುವ 30 ತಾಲ್ಲೂಕುಗಳಲ್ಲಿ ಹಾಗೂ ಮೈಸೂರು ವಿಭಾಗದಲ್ಲಿ ಬರಪೀಡಿತವೆಂದು ಘೋಷಿಸಿರುವ 11 ತಾಲ್ಲೂಕುಗಳಲ್ಲಿ ಬರಪರಿಹಾರ ಕಾರ್ಯಗಳನ್ನು ಕೈಗೊಳ್ಳಲು ಪ್ರತಿ ತಾಲ್ಲೂಕಿಗೆ ರೂ.1 ಕೋಟಿಯಂತೆ ಕೆಳಕಂಡಂತೆ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಬೆಂಗಳೂರು ನಗರ | 400.00 |
| 2 | ಬೆಂಗಳೂರು ಗ್ರಾಮಾಂತರ | 300.00 |
| 3 | ರಾಮನಗರ | 100.00 |
| 4 | ಕೋಲಾರ | 500.00 |
| 5 | ಚಿಕ್ಕಬಳ್ಳಾಪುರ | 600.00 |
| 6 | ತುಮಕೂರು | 600.00 |
| 7 | ಚಿತ್ರದುರ್ಗ | 400.00 |
| 8 | ದಾವಣಗೆರೆ | 100.00 |
| 9 | ಚಾಮರಾಜನಗರ | 300.00 |
| 10 | ಮೈಸೂರು | 200.00 |
| 11 | ಮಂಡ್ಯ | 600.00 |
| | **ಒಟ್ಟು** | **4100.00** |

(ರೂ.ನಾಲ್ಕು ಸಾವಿರದ ಒಂದುನೂರು ಲಕ್ಷಗಳು ಮಾತ್ರ)

ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಕೆಳಕಂಡಂತೆ ಬರಪರಿಹಾರ ಕಾರ್ಯಕೈಗೊಳ್ಳಲು ಉಪಯೋಗಿಸುವುದು.

1. ಕುಡಿಯುವ ನೀರು
2. ಮೇವು ಸರಬರಾಜು
3. ಗೋಶಾಲೆ ತೆರೆಯುವುದು

ಕೇಂದ್ರ ಸರ್ಕಾರವು ದಿನಾಂಕ: 27–06–2007ರಂದು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು, ಹಾಗೂ ಪರಿಹಾರ ಕಾರ್ಯಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ ಆದೇಶ/ ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 692 ವೆಚ್ಚ –7/2009 ದಿನಾಂಕ: 10–09–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಮಚಂದ್ರಯ್ಯ**

ಪಿ.ಆರ್. 2250 ಸರ್ಕಾರದ ಅಧೀನ ಕಾರ್ಯದರ್ಶಿ ಕಂದಾಯ ಇಲಾಖೆ

(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ॥ ನಾಗೇಂದ್ರಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂ: ಜೆ.ಆರ್.ಒ (3) 249/2008–09 ದಿನಾಂಕ: 14–07–2009

**ಪ್ರಸ್ತಾವನೆ:**

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ॥ ನಾಗೇಂದ್ರಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ ಇವರು ದಿನಾಂಕ: 07–07–2007 ರಂದು ಸರ್ಕಾರಿ ಸೇವೆಗೆ ಸೇರಿದ್ದು, ದಿನಾಂಕ: 02–07–2008 ರಿಂದ ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರ ಖಾಯಂಪೂರ್ವ ಸೇವಾವಧಿ ಘೋಷಣೆಯಾಗಿರುವುದಿಲ್ಲ. ಸದರಿ ವೈದ್ಯರು ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಪ್ರೊಬೆಷನರಿ ನಿಯಮಗಳ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 93 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ನಾಗೇಂದ್ರಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ ಇವರು ದಿನಾಂಕ: 02–07–2008 ರಿಂದ ಖಾಯಂ ಪೂರ್ವ ಸೇವಾವಾಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6 ರಡಿಯಲ್ಲಿ ದಿನಾಂಕ: 02–07–2008 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಪಿ.ಆರ್. 2273 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ವಿಷಯ:** ಡಾ॥ ಮಧುಶ್ರೀ ಅಡ್ಕತ್ತಿಮಾರು, ದಂತ ಆರೋಗ್ಯಾಧಿಕಾರಿ, ತಾಲ್ಲೂಕು ಆಸ್ಪತ್ರೆ, ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಎಲ್‌ಆರ್‌ಒ/134/2005–06 ದಿನಾಕ: 19–04–2007 ಮತ್ತು 03–07–2009

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರಗಳಲ್ಲಿ, ಡಾ॥ ಮಧುಶ್ರೀ ಅಡ್ಕತ್ತಿಮಾರು, ದಂತ ಆರೋಗ್ಯಾಧಿಕಾರಿ, ತಾಲ್ಲೂಕು ಆಸ್ಪತ್ರೆ, ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ ಇವರು ಸರ್ಕಾರಿ ಆದೇಶ ಸಂಖ್ಯೆ: ಆಕುಕ 10 ಹೆಚ್‌ಎಸ್‌ಡಿ 2002 ದಿನಾಂಕ: 16–08–2002 ರ ಪ್ರಕಾರ ದಿನಾಂಕ: 01–09–2002 ರಂದು ಸೇವೆಗೆ ಸೇರಿದ್ದು, ಖಾಯಂ ಪೂರ್ವ ಸೇವಾವಧಿಯು ಘೋಷಣೆಯಾಗಿರುವುದಿಲ್ಲ. ಇವರು ದಿನಾಂಕ: 31–08–2006 ರಿಂದ ಜಾರಿಗೆ ಬರುವಂತೆ ತಮ್ಮ ಹುದ್ದೆಗೆ ರಾಜೀನಾಮೆ ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ, ಇವರ ವಿರುದ್ಧ ಯಾವುದೇ ಇಲಾಖಾ

ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲವಾದ್ದರಿಂದ ಸದರಿ ದಿನಾಂಕದಿಂದ ಅನ್ವಯವಾಗುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ. ಅಲ್ಲದೇ, ದಿನಾಂಕ: 01–03–2006 ರಿಂದ 31–05–2006 ರ ವರೆಗೆ ವೈದ್ಯಕೀಯ ಕಾರಣದ ಮೇಲೆ ಹಾಗೂ ದಿನಾಂಕ: 1/6/2006 ರಿಂದ 31/8/2006ರ ವರೆಗೆ ವೇತನ ರಹಿತ ರಜೆ ನೀಡುವಂತೆ ಕೋರಿದ್ದು, ರಜೆಯನ್ನು ಮಂಜೂರು ಮಾಡಿರುವುದಿಲ್ಲವೆಂದು ಸಹ ವರದಿ ಮಾಡಿರುತ್ತಾರೆ. ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 75 ಹೆಚ್‌ಎಸ್‌ಡಿ 2007, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಮಧುಶ್ರೀ ಅಡ್ಕತ್ತಿಮಾರು, ದಂತ ಆರೋಗ್ಯಾಧಿಕಾರಿ, ತಾಲ್ಲೂಕು ಆಸ್ಪತ್ರೆ, ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ ಇವರು ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ:01.03.2006 ರಿಂದ ಅನ್ವಯವಾಗುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಪಿ.ಆರ್. 2274

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಮಹಮದ್ ಗೌಸ್ ಕೆ.ಎ.ಎಸ್ (ನಿವೃತ್ತ) ಅಧಿಕಾರಿ, ಶ್ರೀ ಹೊಂಬಯ್ಯ ನಿವೃತ್ತ ಜಿಲ್ಲಾ ಖಜಾನಾಧಿಕಾರಿ ಮತ್ತು ಡಿ.ರಾಧಾಕೃಷ್ಣ ನಿವೃತ್ತ ಶಿರಸ್ತೇದಾರ್ ವಿರುದ್ಧ ಇಲಾಖಾ ವಿಚಾರಣೆ ಬದಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿ ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ: ಸಿಆಸುಇ 41 ಎಸ್‌ಇಎನ್ 2004 ದಿ: 22–04–2006.
2. ಸರ್ಕಾರಿ ಆದೇಶ ಸಂ: ಸಿಆಸುಇ 41 ಎಸ್‌ಇಎನ್ 2004 ದಿ: 21–06–2007.
3. ಸರ್ಕಾರಿ ಆದೇಶ ಸಂ: ಸಿಆಸುಇ 41 ಎಸ್‌ಇಎನ್ 2004 ದಿ: 04–04–2007.
4. ಶ್ರೀ ಎಸ್.ಎಸ್.ಸಂಗೋಳಿ ನಿವೃತ್ತ ಜಿಲ್ಲಾ ನ್ಯಾಯಾಧೀಶರ ಮನವಿ ದಿ: 08–07–2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಮಹಮದ್ ಗೌಸ್ ಕೆ.ಎ.ಎಸ್(ನಿವೃತ್ತ)ಅಧಿಕಾರಿ ಹಾಗೂ ಇತರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಶ್ರೀನಿವಾಸ್ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಚಾಮರಾಜನಗರ ಜಿಲ್ಲಾಧಿಕಾರಿಯವರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಶ್ರೀನಿವಾಸ್ ನಿವೃತ್ತ ನ್ಯಾಯಾಧೀಶರು ಇವರ ಬದಲಿಗೆ ಶ್ರೀ ಎಸ್.ಎಸ್.ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ಈ ಪ್ರಕರಣದಲ್ಲಿ ಮಂಡನಾಧಿಕಾರಿಯನ್ನಾಗಿ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು) ರವರನ್ನು ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ ವಿಚಾರಣಾ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಆರೋಪಿತ ಅಧಿಕಾರಿಗಳು ಅವ್ಯವಹಾರದಲ್ಲಿ ತೊಡಗಿರುವ ಬಗ್ಗೆ ಸಾಕಷ್ಟು ಸಾಕ್ಷ್ಯಾಧಾರಗಳಿದ್ದರೂ ಸಹ ಆಪಾದಿತರ ಮೇಲಿನ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿಯನ್ನು ಸಲ್ಲಿಸಿದ್ದರು. ಈ ವಿಚಾರಣೆಯನ್ನು ಒಪ್ಪದೇ ಇರಲು ಶಿಸ್ತು ಪ್ರಾಧಿಕಾರವು ನಿರ್ಣಯಿಸಿ ವಿಚಾರಣಾ ವರದಿಯನ್ನು ವಿಚಾರಣಾಧಿಕಾರಿಗಳಿಗೆ ಹಿಂದಿರುಗಿಸಿ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಶ್ರೀ ಎಸ್.ಎಸ್.ಸಂಗೊಳ್ಳಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ತಮ್ಮ ವೈಯಕ್ತಿಕ ಕಾರಣಗಳಿಂದಾಗಿ ವಿಚಾರಣೆಯನ್ನು ಪುನಃ ನಡೆಸಲು ಸಾಧ್ಯವಿರುವುದಿಲ್ಲವೆಂದು ತಿಳಿಸಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಪ್ರಕರಣದ ವಿಚಾರಣೆ ನಡೆಸಲು ಬದಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಲು ನಿರ್ಣಯಿಸಿದೆ. ಅದರಂತೆ ಈ ಆದೇಶ:

**ಸರ್ಕಾರಿ ಆದೇಶ ಸಂ: ಆಸುಇ 38 ಕೆಇವಿ 2007, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(2) ಹಾಗೂ ಅದೇ ನಿಯಮಾವಳಿಯ 13 ರಲ್ಲಿ ಪದತ್ತವಾದ ಅಧಿಕಾರವನ್ನು ಚಲಾಯಿಸಿ

ಶ್ರೀ ಎನ್.ಎಸ್.ಸಂಗೊಳ್ಳಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಬದಲಾಗಿ ಅಪರ ಪ್ರಾದೇಶಿಕ ಆಯುಕ್ತರು, (ಭೂ ನಿರ್ವಹಣೆ ಮತ್ತು ಇತರೇ), ಮೈಸೂರು ವಿಭಾಗ, ಮೈಸೂರು ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿದ್ದ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–1) ಇವರ ಬದಲಾಗಿ ತಹಸಿಲ್ದಾರ್, (ಅಡಿಟ್ ಮತ್ತು ಸಿಸಿಎ), ಪ್ರಾದೇಶಿಕ ಆಯುಕ್ತರ ಕಛೇರಿ, ಮೈಸೂರು ರವರನ್ನು ಮಂಡನಾಧಿಕಾರಿಯಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು ಆದಷ್ಟು ಶೀಘ್ರವಾಗಿ ಮುಕ್ತಾಯಗೊಳಿಸಿ ಮೂರು ತಿಂಗಳೊಳಗಾಗಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್. 2275

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ವಿಷಯ:** ಶ್ರೀ ಸಿ. ನಾಗಯ್ಯ, ಕೆ.ಎ.ಎಸ್(ಹಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಉಪ ಕಾರ್ಯದರ್ಶಿ(ಆಡಳಿತ) ಜಿಲ್ಲಾ ಪಂಚಾಯತ್ ಕೋಲಾರ, ಹಾಲಿ ವಿಶೇಷ ಜಿಲ್ಲಾಧಿಕಾರಿ, ಯು.ಕೆ.ಪಿ ಬಾಗಲಕೋಟೆ. ಇವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂ: ಸಿಆಸುಇ 236 ಕೆಇವಿ 07 ದಿ: 20–08–2008.
2. ಶ್ರೀ ಡಾ: ಸಿ. ನಾಗಯ್ಯ, ಕೆ.ಎ.ಎಸ್ ಅಧಿಕಾರಿ, ಹಿಂದಿನ ಉಪ ಕಾರ್ಯದರ್ಶಿ(ಆಡಳಿತ) ಜಿಲ್ಲಾ ಪಂಚಾಯತ್ ಕೋಲಾರ ಇವರ ದಿ: 14–11–08ರ ಉತ್ತರ.

**ಪ್ರಸ್ತಾವನೆ:**

ಶ್ರೀ ಡಾ: ಸಿ.ನಾಗಯ್ಯ, ಕೆ.ಎ.ಎಸ್(ಹಿರಿಯ ಶ್ರೇಣಿ) ಅಧಿಕಾರಿ ರವರು, ಜಿಲ್ಲಾ ಪಂಚಾಯತ್ ಕೋಲಾರ ಇಲ್ಲಿ ಉಪ ಕಾರ್ಯದರ್ಶಿ(ಆಡಳಿತ) ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ಜಿಲ್ಲಾ ಪಂಚಾಯತ್‌ನ ಕಛೇರಿಗೆ ಅವಶ್ಯವಿರುವ ಗಣಕ ಯಂತ್ರಗಳ ಖರೀದಿಯಲ್ಲಿ ದುರ್ನಡತೆ ಎಸಗಿರುವ ಆರೋಪ ಕುರಿತು ಅವರ ವಿರುದ್ಧ ಕ್ರಮ ಸಂ: (1)ರಲ್ಲಿ ಓದಲಾದ ದಿ: 20–08–08 ರಲ್ಲಿ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11–ಎ ರನ್ವಯ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಯು ಮೇಲೆ ಕ್ರಮ ಸಂ: (2)ರಲ್ಲಿ ಓದಲಾದ ದಿ: 14–11–08ರಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ:

**ಸರ್ಕಾರಿ ಆದೇಶ ಸಂ: ಸಿಆಸುಇ 236 ಕೆಇವಿ 2007, ಬೆಂಗಳೂರು, ದಿನಾಂಕ: 22ನೇ ಸೆಪ್ಟಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಾ॥ ಸಿ. ನಾಗಯ್ಯ, ಕೆ.ಎ.ಎಸ್(ಹಿರಿಯ ಶ್ರೇಣಿ) ಅಧಿಕಾರಿ ಅಂದಿನ ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್ ಕೋಲಾರ, ಹಾಲಿ ವಿಶೇಷ ಜಿಲ್ಲಾಧಿಕಾರಿ, ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ರವರು ಇವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ನಡೆಸಲು ಶ್ರೀ ಕೆ.ರಾಜಶೇಖರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಇವರು ಸರ್ಕಾರಿ ಆದೇಶ ಸಂ: ಸಿಆಸುಇ 22 ಸೇಇವಿ 2007 ದಿ: 11–04–2008 ರನ್ವಯ ರೂ: 8000/–ಗಳ ಗೌರವಧನ ಹಾಗೂ ವಾಹನ ಭತ್ಯ ರೂ: 1500/–ಗಳನ್ನು ಪಡೆಯಲು ಅರ್ಹರಿರುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಉಪ ಕಾರ್ಯದರ್ಶಿ(ಆಡಳಿತ) ಜಿಲ್ಲಾ ಪಂಚಾಯತ್, ಕೋಲಾರ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣೆಯನ್ನು ಅತಿ ಶೀಘ್ರವಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್. 2276

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ವಿಷಯ:** ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಮುಖ್ಯಮಂತ್ರಿಗಳ ಪತ್ರಿಕಾ ಕಾರ್ಯದರ್ಶಿಗಳ ಕಛೇರಿಯಲ್ಲಿ ವಾರ್ತಾಧಿಕಾರಿಯ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಪ್ರಸ್ತಾವನೆ:**

ಮುಖ್ಯಮಂತ್ರಿಯವರ ಪತ್ರಿಕಾ ಕಾರ್ಯದರ್ಶಿಗಳ ಕಛೇರಿಯಲ್ಲಿ ಹೆಚ್ಚಾಗಿರುವ ಕಾರ್ಯ ಒತ್ತಡದಿಂದಾಗಿ ವಾರ್ತಾಧಿಕಾರಿಯ ಒಂದು ಹುದ್ದೆಯನ್ನು ಸೃಜಿಸುವ ಅಗತ್ಯತೆಯನ್ನು ಮನಗಂಡ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 746 ಸಅಸೇ 2008, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2009**

ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಮುಖ್ಯಮಂತ್ರಿಗಳ ಪತ್ರಿಕಾ ಕಾರ್ಯದರ್ಶಿಗಳ ಕಛೇರಿಯಲ್ಲಿ ವಾರ್ತಾಧಿಕಾರಿಯ ಒಂದು ಹುದ್ದೆಯನ್ನು ತಾತ್ಕಾಲಿಕವಾಗಿ ದಿನಾಂಕ: 01–10–2008 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 975 ವೆಚ್ಚ–12/09, ದಿನಾಂಕ: 06–08–2009 ಹಾಗೂ ಆಇ 1077 ವೆಚ್ಚ–12/09, ದಿನಾಂಕ: 05–09–2009 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಶಿವರಾಮ್**

ಪಿ.ಆರ್. 2277

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3).

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸೇಇವಿ 2009, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2009.**

**ವಿಷಯ:** ಶ್ರೀ ಕೆ. ಸುಬ್ಬಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ, ಇವರ ಅಮಾನತ್ತನ್ನು ರದ್ದುಗೊಳಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

ಶ್ರೀ ಕೆ. ಸುಬ್ಬಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಕರ್ನಾಟಕ ಸಕಾರ ಸಚಿವಾಲಯ ಇವರನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸೇಇವಿ 2009 ದಿನಾಂಕ: 11–06–2009 ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿ ಇಟ್ಟಿರುವುದರಿಂದಲೂ:

ಶ್ರೀ ಕೆ.ಸುಬ್ಬಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ಅಮಾನತ್ತನ್ನು ತೆರವುಗೊಳಿಸಿ ಅವರನ್ನು ಮತ್ತೆ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ತೀರ್ಮಾನಿಸಿರುವುದರಿಂದಲೂ:

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಾವಳಿ 1957ರ ನಿಯಮ 10 (5) (ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಸುಬ್ಬಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಬಾಕಿ ಇಟ್ಟು ಅವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಅವರನ್ನು ಸೇವೆಗೆ ತೆಗೆದುಕೊಳ್ಳುತ್ತದೆ.

ಶ್ರೀ ಕೆ.ಸುಬ್ಬಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ನಿಯುಕ್ತಿಗೊಳಿಸಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಶಿವರಾಮ್**

ಪಿ.ಆರ್. 2278

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀಮತಿ ವಿಜಯಕುಮಾರಿ ಶೆಣೈ, ಕೆ.ಎ.ಎಸ್(ಕಿರಿಯ ಶ್ರೇಣಿ), ಹಿಂದಿನ ಅಧ್ಯಕ್ಷರು, ಭೂ ನ್ಯಾಯಮಂಡಳಿ, ಉಡುಪಿ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ಅಂತಿಮ ಆದೇಶ.

**ಓದಲಾಗಿದೆ:**
1. ದಿನಾಂಕ: 17–10–07 ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 308 ಕೆಇವಿ 07
2. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ಸಂಖ್ಯೆ: EST(1) CR 87/07–08, ದಿನಾಂಕ: 02–09–08

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ, ಶ್ರೀಮತಿ ವಿಜಯಕುಮಾರಿ ಶೆಣೈ, ಕೆ.ಎ.ಎಸ್(ಕಿರಿಯ ಶ್ರೇಣಿ), ಇವರು ಈ ಹಿಂದೆ ಅಧ್ಯಕ್ಷರು, ಭೂ ನ್ಯಾಯಮಂಡಳಿ, ಉಡುಪಿ ತಾಲ್ಲೂಕು. ಉಡುಪಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಉಡುಪಿ ತಾಲ್ಲೂಕು ಏಣಗುಡ್ಡ ಗ್ರಾಮದ ಸರ್ವೆ ನಂ 40/6, 40/5, 40/11 60/4 ರಲ್ಲಿನ ಜಮೀನಿಗೆ ಸಂಬಂಧಿಸಿದಂತೆ ಕರ್ನಾಟಕ ಉಚ್ಚ ನ್ಯಾಯಾಲಯವು WP No. 6205/82 ಹಾಗೂ 25116/94 ರಲ್ಲಿ ದಿನಾಂಕ: 04–02–97 ರಂದು ನೀಡಿರುವ ತೀರ್ಪಿನಂತೆ ಭೂ ನ್ಯಾಯ ಮಂಡಳಿಯ ಪ್ರಕರಣವನ್ನು ಸರಿಯಾಗಿ ತನಿಖೆ ಮಾಡದೆ

ವಿಲೇವಾರಿ ಮಾಡಿ ಕರ್ತವ್ಯ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನ ತೋರಿರುವ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ನಡೆಸಿ ವರದಿ ಸಲ್ಲಿಸಲು, ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ವಿಭಾಗಾಧಿಕಾರಿಗಳು, ಕುಂದಾಪುರ ಉಪ ವಿಭಾಗ, ಕುಂದಾಪುರ ಇವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ, ವಿಚಾರಣಾಧಿಕಾರಿಗಳು ಶ್ರೀಮತಿ ವಿಜಯಕುಮಾರಿ ಶೆಣೈ, ಕೆ.ಎ.ಎಸ್(ಕಿರಿಯ ಶ್ರೇಣಿ) ಅಧಿಕಾರಿಯ ವಿರುದ್ಧದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಸರ್ಕಾರವು, ಕೂಲಂಕುಷವಾಗಿ ಪರಿಶೀಲಿಸಿದ ನಂತರ ವಿಚಾರಣಾ ವರದಿಯನ್ನು ಅಂಗೀಕರಿಸಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 308 ಕೆಇವಿ 07, ಬೆಂಗಳೂರು, ದಿನಾಂಕ: 17ನೇ ಸೆಪ್ಟಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಶ್ರೀಮತಿ ವಿಜಯಕುಮಾರಿ ಶೆಣೈ, ಕೆ.ಎ.ಎಸ್(ಕಿರಿಯ ಶ್ರೇಣಿ), ಹಿಂದಿನ ಅಧ್ಯಕ್ಷರು, ಭೂ ನ್ಯಾಯಮಂಡಳಿ, ಉಡುಪಿ ತಾಲ್ಲೂಕು (ಹಾಲಿ ಉಪ ನಿರ್ದೇಶಕರು, ಆಹಾರ, ನಾಗರೀಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ) ಇವರನ್ನು ಪ್ರಸ್ತಾವನೆಯಲ್ಲಿ ವಿವರಿಸಿದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 2279

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಕೇಂದ್ರ ಕಛೇರಿಯಿಂದ ಹಿರಿಯ ಭೂವಿಜ್ಞಾನಿ(ಖನಿಜ), ಕೋಲಾರ, ಕಛೇರಿಗೆ 1 ಭೂವಿಜ್ಞಾನಿ ಹುದ್ದೆಯನ್ನು ಸ್ಥಳಾಂತರಿಸುವ ಕುರಿತು.

**ಓದಲಾಗಿದೆ:**
1. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ದಿನಾಂಕ: 30-09-2008ರ ಪತ್ರ ಸಂಖ್ಯೆ: ಗಭೂಇ : ಸಿಬ್ಬಂದಿ: ಅ-1: ಭೂವಿಸ್ಥ/2008-09/2437.
2. ದಿ: 21-08-07ರ ಸರ್ಕಾರಿ ಆದೇಶ ಸಂಖ್ಯೆ: ಕಂಇ/27/ಭೂದಾಪು/2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 30-09-2008ರ ಪತ್ರದಲ್ಲಿ, ಮೇಲೆ (2)ರಲ್ಲಿ ಓದಲಾದ ದಿನಾಂಕ:21.08.2007ರ ಸರ್ಕಾರಿ ಆದೇಶದಲ್ಲಿ, ಜಿಲ್ಲೆಗಳ ಪುನರ್ ವಿಂಗಡನೆಯನ್ನು ಕೈಗೊಂಡಿದ್ದು, ನೂತನವಾಗಿ ಸ್ಥಾಪಿಸಲಾದ ಜಿಲ್ಲೆಗಳಿಗೆ ಹೊಸ ಹುದ್ದೆಗಳ ಸೃಜನೆ ಹಾಗೂ ಮರುಹಂಚಿಕೆಯನ್ನು ಮಾಡುವ ಸಂದರ್ಭದಲ್ಲಿ, ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಹಿರಿಯ ಭೂವಿಜ್ಞಾನಿ (ಖನಿಜ), ಕೋಲಾರ, ಕಛೇರಿಯಿಂದ ಸದರಿ ಕಛೇರಿಗೆ ಮಂಜೂರಾಗಿದ್ದ ಒಂದೇ ಒಂದು ಭೂವಿಜ್ಞಾನಿ ಹುದ್ದೆಯನ್ನು ಹಿರಿಯ ಭೂವಿಜ್ಞಾನಿ (ಖನಿಜ), ಚಿಕ್ಕಬಳ್ಳಾಪುರ, ಕಛೇರಿಗೆ ಮರುವಿನ್ಯಾಸಗೊಳಿಸಲ್ಪಟ್ಟಿದ್ದು (re-deployed), ಹಿರಿಯ ಭೂವಿಜ್ಞಾನಿ (ಖನಿಜ), ಕೋಲಾರ, ಕಛೇರಿಯಲ್ಲಿ ಭೂವಿಜ್ಞಾನಿ ಹುದ್ದೆಯೇ ಇಲ್ಲದಂತಾಗಿ ಕಛೇರಿಯ ಕಾರ್ಯನಿರ್ವಹಣೆ, ಕ್ಷೇತ್ರ ಕೆಲಸ, ಅನಧಿಕೃತ ಗಣಿಗಾರಿಕೆ ತಡೆಗಟ್ಟುವಂತಹ ಕೆಲಸಗಳು ಕುಂಠಿತಗೊಂಡಿದ್ದು, ರಾಜಸ್ವ ವಸೂಲಿಯ ಗುರಿಯನ್ನು ತಲುಪಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸುತ್ತಾ, ಈ ಸಮಸ್ಯೆಯನ್ನು ಬಗೆಹರಿಸಲು ನಿರ್ದೇಶಕರ ಕಛೇರಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು, ಇಲ್ಲಿ ಲೆಕ್ಕ ಶೀರ್ಷಿಕೆ 2853-02-102-0-01 ಯೋಜನೇತರ (ಫೆರಸ್ ಮಿನರಲ್) ಇದರಡಿಯಲ್ಲಿ ಒಟ್ಟು 12 ಭೂವಿಜ್ಞಾನಿ ಹುದ್ದೆಗಳಿದ್ದು, ಆಡಳಿತದ ಹಿತದೃಷ್ಟಿಯಿಂದ ಈ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಹಿರಿಯ ಭೂವಿಜ್ಞಾನಿ (ಖನಿಜ) ಕಛೇರಿ, ಕೋಲಾರ, ಇಲ್ಲಿಗೆ ಸ್ಥಳಾಂತರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಸೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ.111.ಎಂಜಿಎಸ್.2008, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು, ಈ ಪ್ರಸ್ತಾವನೆಯಿಂದಾಗಿ ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆಯಿಲ್ಲದಿರುವ ಪ್ರಯುಕ್ತ ಹಾಗೂ ಆಡಳಿತದ ಹಿತದೃಷ್ಟಿಯಿಂದ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಕೇಂದ್ರ ಕಛೇರಿ, ಬೆಂಗಳೂರು, ಇಲ್ಲಿನ ಲೆಕ್ಕಶೀರ್ಷಿಕೆ 2853-02-102-0-01 ಯೋಜನೇತರ(ಫೆರಸ್ ಮಿನರಲ್) ಇದರಡಿಯಲ್ಲಿನ ಒಟ್ಟು 12 ಭೂವಿಜ್ಞಾನಿ ಹುದ್ದೆಗಳ ಪೈಕಿ, ಒಂದು ಭೂವಿಜ್ಞಾನಿ ಹುದ್ದೆಯನ್ನು ಹಿರಿಯ ಭೂವಿಜ್ಞಾನಿ (ಖನಿಜ)

ಕಛೇರಿ, ಕೋಲಾರ, ಇಲ್ಲಿಗೆ ಸ್ಥಳಾಂತರಿಸಲು ಸರ್ಕಾರವು ಅನುಮೋದಿಸಿದೆ. ಈ ಹುದ್ದೆಗೆ ಅಗತ್ಯವಿರುವ ಆಯವ್ಯಯವನ್ನು ಅಪೆಂಡಿಕ್ಸ್–B ಯಲ್ಲಿ ಒದಗಿಸಿಕೊಳ್ಳಲು ಸೂಕ್ತ ಕ್ರಮವಹಿಸುವಂತೆ ಇಲಾಖೆಗೆ ಸೂಚಿಸಿದೆ.

ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ದಿ: 04–11–08 ರ ಟಿಪ್ಪಣಿ ಸಂಖ್ಯೆ: ವಾಕೈ ಆಂಆಸ(2) 2008 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2282

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ನಿರ್ದೇಶಕರ ಹುದ್ದೆಗೆ ನೇಮಕಾತಿ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಲಾ 185 ಎಲ್ಏಎಂ 2005 ದಿನಾಂಕ: 23–09–2005.

2. ಪತ್ರ ಸಂಖ್ಯೆ: 09/ಕಾಸಂಸು/ಎ–6/515 ದಿನಾಂಕ: 01–09–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1)ರ ಸರ್ಕಾರದ ಆದೇಶದಲ್ಲಿ ಶ್ರೀ ಜಿ.ದಕ್ಷಿಣಾಮೂರ್ತಿ, ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಇಲಾಖೆ ಇವರನ್ನು ಹೊಸದಾಗಿ ರಚಿತವಾದ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಗೆ ಪ್ರಥಮ ನಿರ್ದೇಶಕರನ್ನಾಗಿ ನೇಮಕ ಮಾಡಲಾಗಿತ್ತು. ಮೇಲೆ ಓದಲಾದ ಕ್ರ.ಸಂ.(2)ರ ಪತ್ರದಲ್ಲಿ ಸದರಿ ಸಂಸ್ಥೆಯ ನಿರ್ದೇಶಕರು ತಮ್ಮ ಪ್ರಸಕ್ತ ಅಧಿಕಾರಾವಧಿಯು ದಿನಾಂಕ: 30–09–2009ರಂದು ಮುಕ್ತಾಯಗೊಳ್ಳುತ್ತಿರುವುದರಿಂದ ಸಂಸ್ಥೆಯ ಬೈಲಾ ನಿಯಮ–16ರ ಮೇರೆಗೆ ತರುವಾಯದ ನಿರ್ದೇಶಕರನ್ನು ಆಡಳಿತ ಪರಿಷತ್ತು ಆಯ್ಕೆ ಸಮಿತಿ ರಚಿಸಿ ಆ ಸಮಿತಿಯು ಮಾಡುವ ಶಿಫಾರಸ್ಸಿನನ್ವಯ ನೇಮಕಾತಿ ಪ್ರಕ್ರಿಯೆ ನಡೆಸಬೇಕಾಗುತ್ತದೆ ಎಂದು ತಿಳಿಸಿದ್ದಾರೆ. ಈಗ ಸಂಸ್ಥೆಯ ನಿರ್ದೇಶಕರ ಹುದ್ದೆ ಖಾಲಿ ಬೀಳುವ ಸಂಭವವನ್ನು ತಪ್ಪಿಸಲು ಹಾಗೂ ಸಂಸ್ಥೆಯ ಹಿತದೃಷ್ಟಿಯಿಂದ ಶ್ರೀ ಜಿ.ದಕ್ಷಿಣಾಮೂರ್ತಿಯವರನ್ನು ನಿರ್ದೇಶಕರ ಹುದ್ದೆಯಲ್ಲಿ ಮುಂದುವರಿಸುವುದು ಸೂಕ್ತವೆಂದು ಅಭಿಪ್ರಾಯ ಪಡಲಾಗಿದೆ.

ಆ ಮೇರೆಗೆ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 143 ಎಲ್ಏಎಂ 2009, ಬೆಂಗಳೂರು, ದಿನಾಂಕ: 29ನೇ ಸೆಪ್ಟಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಆಡಳಿತ ಮಂಡಳಿಯ (Governing Council) ಘಟನೋತ್ತರ ಅನುಮೋದನೆ ಪಡೆಯುವ ಷರತ್ತಿಗೆ ಒಳಪಟ್ಟು ಶ್ರೀ ಜಿ.ದಕ್ಷಿಣಾಮೂರ್ತಿ ಇವರನ್ನು ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ನಿರ್ದೇಶಕರ ಹುದ್ದೆಯಲ್ಲಿ ದಿನಾಂಕ: 01–10–2009 ರಿಂದ ಅನ್ವಯವಾಗುವಂತೆ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಸಿದ್ದಲಿಂಗೇಶ್**

ಪಿ.ಆರ್. 2283

ಸರ್ಕಾರದ ಕಾರ್ಯದರ್ಶಿ

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಟಿ.ಎಚ್.ಎಂ.ಕುಮಾರ್, ಕೆ.ಎ.ಎಸ್(ಹಿ.ಶ್ರೇ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂ: ಸಿಆಸುಇ 331 ಕೆಇವಿ 07 ದಿ: 10–12–08.

2. ಶ್ರೀ ಟಿ.ಎಚ್. ಎಂ.ಕುಮಾರ್ ಕೆ.ಎ.ಎಸ್(ಹಿ.ಶ್ರೇ) ಅಧಿಕಾರಿ ರವರ ಲಿಖಿತ ಹೇಳಿಕೆ ದಿ: 24.0.09

**ಪ್ರಸ್ತಾವನೆ:**

ಶ್ರೀ ಟಿ.ಎಚ್.ಎಂ.ಕುಮಾರ್, ಕೆ.ಎ.ಎಸ್(ಹಿ.ಶ್ರೇ) ಅಧಿಕಾರಿ ರವರು ಈ ಹಿಂದೆ ಸಹಾಯಕ ಆಯುಕ್ತರು, ಬಳ್ಳಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ ಕರ್ತವ್ಯಲೋಪ ಕುರಿತು ಈ ಕೆಳಕಂಡ ಆರೋಪಗಳ ಕುರಿತು ವಿಚಾರಣೆ ನಡೆಸಲು ಮೇಲೆ ಕ್ರಮ ಸಂ(1)ರಲ್ಲಿ ಓದಲಾದ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಇವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು.

**ಆರೋಪ: 1** ಬಳ್ಳಾರಿ ನಗರ ಸರ್ವೆ ನಂ:324/1 ವಾರ್ಡ್ ನಂ:22ರಲ್ಲಿ 80X60 ಚದರ ಅಡಿ ವಿಸ್ತೀರ್ಣವನ್ನು ಸಣ್ಣ ಹುಲಗಪ್ಪ ತಂದೆ ಹುಲಗಪ್ಪ ಇವರ ಹೆಸರಿನಲ್ಲಿ ಇಟ್ಟಂಗಿ ಬಟ್ಟಿ ನಡೆಸಲು ನಿಯಮಗಳಲ್ಲಿ ಅವಕಾಶ ಇಲ್ಲದಿದ್ದರೂ ಈ ಅಂಶವನ್ನು ಪರಿಶೀಲಿಸದೇ ಶಿಫಾರಸ್ಸು ಮಾಡಿ ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ನೀವು ದುರ್ನಡತೆಯನ್ನೆಸಗಿರುವ ಆರೋಪ.

**ಆರೋಪ: 2** 2006–07ನೇ ಸಾಲಿನ ವಾರ್ಷಿಕ ತನಿಖಾ ಕಾರ್ಯಕ್ರಮದ ಪ್ರಕಾರ ಗ್ರಾಮ ಲೆಕ್ಕಿಗರು ಅಥವಾ ಕಂದಾಯ ನಿರೀಕ್ಷಕರ ಕಛೇರಿ ತನಿಖೆಯನ್ನು ಮಾಡಬೇಕಾಗಿದ್ದು ಅದನ್ನು ಮಾಡದೇ ಉಲ್ಲಂಘಿಸಿರುವ ಆರೋಪ.

**ಆರೋಪ: 3** 2006–07ನೇ ಸಾಲಿನ ದಿನಚರಿಗಳನ್ನು ಪ್ರತಿ ತಿಂಗಳು ನಿಗಧಿತ ಅವಧಿಯೊಳಗೆ ಕಳುಹಿಸಬೇಕಾಗಿದ್ದು, ಅವುಗಳನ್ನು ವಿಳಂಬವಾಗಿ ಕಳುಹಿಸಿ ಕರ್ತವ್ಯದಲ್ಲಿ ಬೇಜವಾಬ್ದಾರಿ ತೋರಿರುವ ಆರೋಪ.

**ಆರೋಪ: 4** ಬಳ್ಳಾರಿ ಜಿಲ್ಲಾಧಿಕಾರಿಗಳ ಕಾರ್ಯಾಲಯದ ಕಡತ ಸಂ:ಪ.ನಿ55 06–07 ರಲ್ಲಿ ಜಿಲ್ಲಾ ಮುಸ್ಲಿಂ ಫೆಡರೇಷನ್ ಬಳ್ಳಾರಿ ಇವರು ನೀಡಿದ ಮನವಿಯ ಬಗ್ಗೆ ಸ್ವತಃ ಸ್ಥಳ ತನಿಖೆ ಮಾಡಲು ನಿಮ್ಮನ್ನು ಕೋರಿದ್ದರೂ ಅದರಂತೆ ನೀವು ಸ್ವತಃ ಸ್ಥಳ ತನಿಖೆಯನ್ನು ಮಾಡದೇ ತಹಸಿಲ್ದಾರರು ಬಳ್ಳಾರಿ ಇವರು ಮಾಡಿದ ಸ್ಥಳ ತನಿಖೆಯನ್ನು ಆಧರಿಸಿ ಜಿಲ್ಲಾಧಿಕಾರಿಗಳು ಇವರಿಗೆ ವರದಿಯನ್ನು ಸಲ್ಲಿಸಿರುತ್ತಾರೆ. ಇದರಿಂದ ಅವರು ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೇ ಬೇಜವಾಬ್ದಾರಿಯಿಂದ ಕರ್ತವ್ಯ ನಿರ್ವಹಿಸಿರುವ ಆರೋಪ.

**ಆರೋಪ: 5** ನ್ಯಾಯಾಲಯ ಪ್ರಕರಣಗಳಲ್ಲಿ ಆದೇಶ ಮಾಡುವ ದಿನಾಂಕವನ್ನು ತೋರಿಸದೇ ತನಿಖಾ ಟಿಪ್ಪಣಿಯಲ್ಲಿ ತೋರಿಸಿರುವಂತೆ 67 ಪ್ರಕರಣಗಳನ್ನು ಆದೇಶಕ್ಕಾಗಿ ಕಾಯ್ದಿರಿಸಿರುತ್ತಾರೆ. ಆದರೆ 47 ಪ್ರಕರಣಗಳಲ್ಲಿ ಆದೇಶಕ್ಕೆ ಕಾಯ್ದಿರಿಸಿದ ನಂತರ 3–4 ತಿಂಗಳವರೆಗೆ ಆದೇಶ ಮಾಡಿರುವುದಿಲ್ಲ. ಆದರೆ ಅವರ ಕಾರ್ಯಾಲಯದ ವಾರ್ಷಿಕ ತನಿಖೆಯನ್ನು ನಿಗಧಿಪಡಿಸಿದ ಕೂಡಲೇ ಎರಡು ದಿನಗಳಲ್ಲಿ ಆದೇಶವನ್ನು ಮಾಡಿರುತ್ತಾರೆ. ಇದರಿಂದ ಅವರು ಸಮಯಕ್ಕೆ ಸರಿಯಾಗಿ ಪರಿಶೀಲಿನೆ ಮಾಡದೇ ಕರ್ತವ್ಯಚ್ಯುತಿ ಎಸಗಿರುವ ಆರೋಪ.

**ಆರೋಪ: 6** ಭೂಸ್ವಾಧೀನ ಪ್ರಕರಣಗಳಲ್ಲಿ ಹಂತವಾರು ಪ್ರಕ್ರಿಯೆಗಾಗಿ ಸರ್ಕಾರವು ವೇಳಾಪಟ್ಟಿಯನ್ನು ನಿಗಧಿಪಡಿಸಿರುತ್ತದೆ. ಆದರೆ ಅವರು ಅದರ ಪ್ರಕಾರ ಹಂತವಾರು ಪ್ರಕ್ರಿಯೆಯನ್ನು ಕೈಗೊಂಡಿರುವುದಿಲ್ಲ. ಹಂತವಾರು ಪರಿಶೀಲಿಸಲಾಗಿ ಪ್ರತಿ ಹಂತದಲ್ಲೂ 60 ದಿನಗಳಿಂದ 258 ದಿನಗಳು ವಿಳಂಭವಾಗಿರುತ್ತದೆ. ಈ ರೀತಿ ಸಮಯಕ್ಕೆ ಸರಿಯಾಗಿ ಕ್ರಮ ಕೈಗೊಳ್ಳದಿರುವುದರಿಂದ ಭೂಸ್ವಾಧೀನ ಪ್ರಕರಣಗಳು ವಿಲೇ ಆಗುವಲ್ಲಿ ವಿಳಂಬವಾಗಿದ್ದು, ಈ ವಿಳಂಬಕ್ಕೆ ಹೊಣೆಗಾರರಾಗಿರುವ ಆರೋಪ.

**ಆರೋಪ: 7** ಶ್ರೀ ನರಸಿಂಹಲು ಪ್ರ.ದ.ಸ ಭೂ ದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಬಳ್ಳಾರಿ ಇವರು ಸುಳ್ಳು ದಾಖಲೆ ನೀಡಿ ಅನುಕಂಪದ ಆಧಾರದ ಮೇಲೆ ನೇಮಕಾತಿ ಹೊಂದಿರುವ ಬಗ್ಗೆ ವಿಚಾರಣೆ ಮಾಡಿ ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು ಬಳ್ಳಾರಿ ಇವರು ಕೋರಿದ್ದು ಅದರಂತೆ ಅದನ್ನು ಸ್ವತಃ ವಿಚಾರಣೆ ಮಾಡದೇ ಪರೀಕ್ಷಾರ್ಥ ಅಧಿಕಾರಿಗಳಾದ ಶ್ರೀ ಕರೇಗೌಡರಿಂದ ವಿಚಾರಣೆ ಮಾಡಿ ವರದಿಯನ್ನು ಕಳುಹಿಸಿರುತ್ತಾರೆ. ಅದರಿಂದ ಅವರು ಜವಾಬ್ದಾರಿಯನ್ನು ಹೊತ್ತುಕೊಳ್ಳುವುದನ್ನು ಕಳೆದುಕೊಂಡು ಇತರರಿಗೆ ಈ ಕೆಲಸವನ್ನು ವಹಿಸಿರುವ ಆರೋಪ.

ಮೇಲೆ ಓದಲಾದ ಕ್ರಮ ಸಂ(2) ರಲ್ಲಿ ಆಪಾದಿತ ಅಧಿಕಾರಿಗಳು ನೋಟೀಸ್‌ಗೆ ಉತ್ತರ ಸಲ್ಲಿಸಿ ತಮ್ಮ ವಿರುದ್ಧದ ಆರೋಪಗಳ ಕುರಿತು ಪ್ರತಿ ಹಂತದಲ್ಲೂ ಮೌಖಿಕವಾಗಿ ಹಾಗೂ ಲಿಖಿತ ರೂಪದಲ್ಲಿ ವರದಿ ಮಾಡಲಾಗುತ್ತಿತ್ತು. ಆದುದರಿಂದ ತಮ್ಮ ವಿರುದ್ಧದ ಆಪಾದನೆಗಳು ಸತ್ಯಕ್ಕೆ ದೂರವಾಗಿರುವುದರಿಂದ ತಮ್ಮನ್ನು ಆರೋಪಗಳಿಂದ ದೋಷಮುಕ್ತರನ್ನಾಗಿಸಲು ಕೋರಿರುತ್ತಾರೆ.

ಶ್ರೀ ಟಿ.ಎಚ್.ಎಂ.ಕುಮಾರ್ ಕೆ.ಎ.ಎಸ್(ಹಿ.ಶ್ರೇ) ರವರು ನೀಡಿರುವ ಉತ್ತರವನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿ ಅವರ ವಿರುದ್ಧ ಮಾಡಲಾದ ಆರೋಪಗಳು ಇಲಾಖಾ ವಿಚಾರಣೆ ಮಾಡುವಷ್ಟು ಗಂಭೀರ ಸ್ವರೂಪದ ಆರೋಪಗಳಾಗಿರುವುದಿಲ್ಲ. ಆದುದರಿಂದ ಆರೋಪಿತ ಅಧಿಕಾರಿಗಳು ನೀಡಿರುವ ಉತ್ತರಗಳು ಸಮಂಜಸವೆಂದು ಕಂಡುಬಂದಿರುವ ಹಿನ್ನೆಲೆಯಲ್ಲಿ, ಇವರ ಉತ್ತರವನ್ನು ಒಪ್ಪಿ, ಇವರನ್ನು ಆರೋಪಗಳಿಂದ ಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 331 ಕೆಇವಿ 2007, ಬೆಂಗಳೂರು ದಿನಾಂಕ: 23ನೇ ಸೆಪ್ಟಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಟಿ.ಎಚ್.ಎಂ.ಕುಮಾರ್, ಕೆ.ಎ.ಎಸ್(ಹಿ.ಶ್ರೇ) ಅಧಿಕಾರಿ ರವರನ್ನು ದಿ: 10–12–2008 ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ ಹಾಗೂ ಇನ್ನು ಮುಂದೆ ಇಂತಹ ಲೋಪಗಳಿಗೆ ಅವಕಾಶ ಕೊಡದಂತೆ ಎಚ್ಚರಿಕೆ ವಹಿಸುವಂತೆ ಸೂಚಿಸಲಾಗಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

ಪಿ.ಆರ್ 2289